# ಶುಕಸಂಜೀವಿನಿ.



ಬೆಲೆ [illegible] ಆಣೆ.

ಶ್ರೀ ಶಂಕರ ಕರ್ನಾಟಕ ಪುಸ್ತಕ ಭಾಂಡಾರ.
ಪ್ರಕಾಶಕರೂ, ಪುಸ್ತಕ ವ್ಯಾಪಾರಿಗಳು.
ಮಾಳಮಡ್ಡಿ, ಧಾರವಾಡ.

ಶ್ರೀ ಶೇಷಾಚಲ ಗ್ರಂಥಮಾಲೆ.

೨೯ ನೆಯ ಗ್ರಂಥ.

—(ಃ೦ಃ)—

# ಶುಕಸಂಜೀವಿನಿ.



ಇದನ್ನು

ಕೃಷ್ಣಾಜಿ ಶಂಕರ ಇಂಗಳಗಿಕರ,

ತಾಲೂಕ ಶಾಳಾ ಮಾಸ್ತರ,

ಕಲಘಟಗಿ,

ಇವರು ಬರೆದರು.

PUBLISHER

Yello Guddo Kulkarni,

Editor, S. C.,

Anandvan-agdi.

1915

ಬೆಲೆ|-೦೮ಆಣೆ.

ಶ್ರೀ ಶಂಕರ ಕರ್ನಾಟಕ ಪುಸ್ತಕ ಭಾಂಡಾರ.

ಪ್ರಕಾಶಕರೂ, ಪುಸ್ತಕ ವ್ಯಾಪಾರಿಗಳು.

[illegible] ಮಾಳಮಡ್ಡಿ, ಧಾರವಾಡ, [illegible]

# ಪ್ರಸ್ತಾವನೆ.

ಈ ಪೌರಾಣಿಕ ಸತ್ಪುರುಷಚರಿತ್ರವನ್ನು ಕಾದಂಬರಿಯ ಸರಣಿಯಿಂದ ಬರೆದಿರುತ್ತದೆ. ಪರೀಕ್ಷಿತರಾಜನಿಗೆ ಭಾಗವತ ಪುರಾಣವನ್ನು ಉಪದೇಶಿಸಿ ಅತ್ಯಲ್ಪಕಾಲದಲ್ಲಿ ಆತನನ್ನು ಉದ್ಧಾರಮಾಡಿದ ಮಹಾಪುರುಷರು ಈ ಶುಕರೇ ಎಂದು ಬರೆಯಲವಶ್ಯವಿಲ್ಲ. ಶುಕಾಚಾರ್ಯರು ಬಾಲಬ್ರಹ್ಮಚಾರಿಗಳಾಗಿದ್ದು, ಗೃಹಸ್ಥಾಶ್ರಮಕ್ಕೆ ಎಳಿಸದೆ ಆಜನ್ಮವಿರಕ್ತರಾಗಿಯೇ ಇರಬೇಕೆಂದು ಸಂಕಲ್ಪಮಾಡಿದ್ದರು. ಅವರ ಆ ಸಂಕಲ್ಪವನ್ನು ಅವರ ಪ್ರೀತಿಯ ತಂದೆಯಾದ ವ್ಯಾಸಮಹರ್ಷಿಗಳು ಭ್ರಷ್ಟವಾಗಮಾಡಿ, ಮಗನನ್ನು ಗೃಹಸ್ಥಾಶ್ರಮಿಯಾಗ ಮಾಡಿದರು. ತಮ್ಮ ಮಗನು ಗೃಹಸ್ಥಾಶ್ರಮವನ್ನು ಬಿಟ್ಟು ಒಮ್ಮೆಲೆ ಕಡೆಯದಾದ ಸನ್ಯಾಸಾಶ್ರಮವನ್ನು ಸ್ವೀಕರಿಸುವದರಿಂದ, ಆತನು ಒಮ್ಮಿಲ್ಲೊಮ್ಮೆ ಭ್ರಷ್ಟತೆಯ ದೋಷಕ್ಕೆ ಗುರಿಯಾಗಬೇಕಾದೀತೆಂದು ತಿಳಿದು, ತಾವೂ, ಜನಕರಾಯನೂ ಕೂಡಿ ಆ ಶುಕಾಚಾರ್ಯರ ಮನಸ್ಸನ್ನು ಗೃಹಸ್ಥಾಶ್ರಮದ ಕಡೆಗೆ ತಿರುಗಿಸಿ "ಧನ್ಯೋಗೃಹಸ್ಥಾಶ್ರಮಃ" ಎಂಬ ಸಿದ್ಧಾಂತವನ್ನು ಜಗತ್ಪ್ರಸಿದ್ಧಮಾಡಿದರು. ಗೃಹಸ್ಥಾಶ್ರಮಿಗಳಿಗೆ ಅತ್ಯುಪಯುಕ್ತವಾದ ಕಥಾಪ್ರಸಂಗವುಳ್ಳ ಈ ಶುಕಸಂಜೀವಿನಿಯನ್ನು ಪ್ರತಿ ಒಬ್ಬ ಗೃಹಸ್ಥಾಶ್ರಮಿಯು ಓದಿಯೇ ತೀರಬೇಕೆಂದು ಬರೆಯುವ ಕಾರಣವಿಲ್ಲ. ಕಥಾಸಂವಿಧಾನಕವು ತೀರ ಸುಲಭವೂ, ರಸಭರಿತವೂ ಆಗಿದ್ದು, ಅದರಲ್ಲಿ ನೀತಿಯು ತುಂಬಿತುಳುಕುತ್ತಿರುವದು; ಸುಲಭ ಪಾರಮಾರ್ಥಿಕ ವಿಷಯವೂ ಅಲ್ಪಸ್ವಲ್ಪ ವಿವರಿಸಲ್ಪಟ್ಟಿರುವದು.

ಈ ವರ್ಷ ಎರಡು ಹೊಸಯಂತ್ರಗಳನ್ನು ತರಿಸಿದ್ದರಿಂದಲೂ, ವೇದ ಮತ್ತು ಸಂಸ್ಕೃತಪಾಠಶಾಲೆಯ ೬೦-೭೦ ಜನ ವಿದ್ಯಾರ್ಥಿಗಳ ಯೋಗಕ್ಷೇಮವನ್ನು ನೋಡಿಕೊಳ್ಳಬೇಕಾದ್ದರಿಂದಲೂ, ಸದ್ಯಕ್ಕೆ ಚಂದ್ರಿಕೆಗೆ ೫ ಸಾವಿರ ರೂಪಾಯಿ ಸಾಲವಾಗಿದೆ. ಆ ಸಾಲದಿಂದ ಶಾಲೆಯ ಉತ್ಕರ್ಷಕ್ಕೂ, ಸದ್ಬೋಧಚಂದ್ರಿಕೆಯ ಪ್ರಸಾರಕ್ಕೂ ಬಹಳ ಪ್ರತಿಬಂಧವಾಗಿರುವದು. ಈ ತೊಂದರೆಯ ನಿವಾರಣಕ್ಕಾಗಿ

ಅತ್ಯುತ್ತಮವಾದ ಈ ಹೊಸಪುಸ್ತಕವನ್ನು ಪ್ರಿಂಟಮಾಡಿಸಿ ಮಾರಾಟಕ್ಕೆ ಸಿದ್ಧಪಡಿಸಿರುತ್ತೇವೆ. ಈ ಪುಸ್ತಕಕ್ಕೆ ಉದಾರರೂ, ಧರ್ಮಾಭಿಮಾನಿಗಳೂ, ಕನ್ನಡದ ಅಭಿಮಾನಿಗಳೂ ಆಶ್ರಯಕೊಟ್ಟರೆ, ಅಲ್ಪಕಾಲದಲ್ಲಿ ಸಾಲವು ತೀರಲಿಕ್ಕೆ ಸಹಾಯವಾಗಿ, ಶ್ರೀ ಶೇಷಾಚಲಗ್ರಂಥಮಾಲೆಯುದ್ವಾರಾ ಇಂಥ ಹಲವು ಸಣ್ಣ-ದೊಡ್ಡ ಉತ್ತಮ ಪುಸ್ತಕಗಳು ಕನ್ನಡ ವಾಙ್ಮಯದಲ್ಲಿ ಪ್ರಸಿದ್ಧವಾಗಬಹುದು!

ಚಂದ್ರಿಕೆಯ ವಾಚಕರ ಪರಿಚಿತ ಲೇಖಕರಾದ ಮ. ರಾ. ರಾ. ಕೃಷ್ಣಜಿ ಶಂಕರ ಇಂಗಳಿಗಿಕರ, ಹೆಡ್‌ಮಾಸ್ತರ, ತಾಲೂಕ ಶಾಳಾ ಕಲಘಟಗಿ, ಇವರು ಕೇವಲ ನಿಸ್ವಾರ್ಥಬುದ್ಧಿಯಿಂದ ಈ ಶುಕಸಂಜೀವಿನಿ ಪುಸ್ತಕವನ್ನು ಚಂದ್ರಿಕೆಗೆ ಅರ್ಪಿಸಿರುವರು. ಅದಕ್ಕಾಗಿ ಚಂದ್ರಿಕೆಯು ಅವರಿಗೆ ತುಂಬಾ ಋಣಿಯಾಗಿರುತ್ತಾಳೆ.

ಆನಂದವನ-ಅಗಡಿ,
ತಾ॥೨೧-೨-೧೫.

ವಿಧೇಯ,
ವೆ. ತಿ. ಗಳಗನಾಥ.



ಶ್ರೀ

# ಶುಕಸಂಜೀವಿನಿ.

## ೧ ಶುಕೋದಯ.

ಶ್ರೀಪರಾಶರನೆಂಬ ಒಬ್ಬ ಸಿದ್ಧಮುನಿಯು ದ್ವಾಪರಯುಗದಲ್ಲಿ ಆಗಿಹೋದನು. ಅವನಿಗೆ ಕೃಷ್ಣನೆಂಬ ಒಬ್ಬ ಹೆಸರಾದ ಮಗನಿದ್ದನು. ಕೃಷ್ಣನ ತಾಯಿಯು ಸತ್ಯವತೀಯೆಂಬವಳು. ಅವಳು ಒಂದು ದ್ವೀಪದಲ್ಲಿ ಈ ಮಗನನ್ನು ಹಡೆದದ್ದರಿಂದ ಇವನಿಗೆ ವಾಡಿಕೆಯಾಗಿ ಕೃಷ್ಣದ್ವೈಪಾಯನನೆಂದು ಕರೆಯುವರು. ಇವನು ಶ್ರೀಮನ್ನಾರಾಯಣನ ಹದಿನೇಳನೆಯ ಅವತಾರ ಪುರುಷನು. ಕಲಿಯುಗದಲ್ಲಿ ವೇದಧರ್ಮದ ಜನರು ಅಜ್ಞಾನಿಗಳೂ, ಅಲ್ಪಾಯುಷಿಗಳೂ, ವಿಷಯಾಭಿಲಾಷಿಗಳೂ ಆಗುವರೆಂದು ಊಹಿಸಿ, ಅವರ ಯೋಗ್ಯತೆಗೆ ಸರಿಯಾಗುವಂತೆ ವೇದವನ್ನು ವಿಭಾಗಿಸಿಟ್ಟು, ಅನಂತಕಲ್ಯಾಣವನ್ನು ಮಾಡಿದ ಅಸಾಧಾರಣಪುರುಷನು ಇವನೇ. ಇವನು ಬುದ್ಧ, ಚಾರ್ವಾಕ ಮುಂತಾದ ನಾಸ್ತಿಕ ಪಂಥದವರ ಧರ್ಮತತ್ವಗಳನ್ನು ಸಹಜವಾಗಿ ಖಂಡನ ಮಾಡಬರಬೇಕೆಂದು ವೇದಾಂತದರ್ಶನ[ಉತ್ತರಮೀಮಾಂಸೆ]ವನ್ನು ಬರೆದಿರುವನು ; ಶೂದ್ರರು, ಸ್ತ್ರೀಯರು ಮೊದಲಾದ ಅನಧಿಕಾರಿಗಳಿಗೆ ಉಪಯೋಗವಾಗಬೇಕೆಂಬ ಸದ್ಧೇತುವಿನಿಂದ ವೇದ–ಶಾಸ್ತ್ರಗಳ ದೊಡ್ಡದೊಡ್ಡ ತತ್ವಗಳನ್ನು ಸಂಗ್ರಹಿಸಿ, ಸುಲಭರೂಪದಿಂದ ಹದಿನೆಂಟು ಪುರಾಣಗಳನ್ನು ರಚಿಸಿ ಇಟ್ಟಿರುವನು. ವೇದಗಳ ಶಾಖೆಗಳನ್ನು ಈತನು ಮಾಡಿದ್ದರಿಂದಲೇ ಈತನಿಗೆ ವೇದವ್ಯಾಸನೆಂದು

ಹೆಸರು ಬಂದಿರುವದು. ಈ ಜಗತ್ತಿನಲ್ಲಿ ನಮಗೆ ಕಂಡುಬರುವ ಧರ್ಮ, ಶಾಸ್ತ್ರ, ನೀತಿ, ವ್ಯವಹಾರ ಮುಂತಾದವುಗಳ ಜ್ಞಾನಭಾಂಡಾರವು ಈ ವ್ಯಾಸಮಹಾರಾಯರದೇ, ಎಂದು ಖಂಡಿತವಾಗಿ ಹೇಳಬಹುದು. ಇವರಿಗೆ ಮಕ್ಕಳಿದ್ದಿಲ್ಲ. ವೇದಾಧ್ಯಯನದಲ್ಲಿಯೂ ವಿದ್ಯಾವ್ಯಾಸಂಗದಲ್ಲಿಯೂ ಇವರು ಬಹುದಿವಸ ಕಾಲಕ್ಷೇಪ ಮಾಡಿದ್ದರಿಂದ, ವಿವಾಹಸುಖಕ್ಕೆ ಇವರ ಮನಸ್ಸು ಎಳಿಸಿದ್ದಿಲ್ಲ. ನಮ್ಮ ವೇದವಿದ್ಯದ ಪ್ರಭಾವವೇ ಇಂತಹದು. ಒಮ್ಮೆ ಈ ವಿದ್ಯದಲ್ಲಿ ಮನಸ್ಸು ತೊಡಕಿದರೆ ತೀರಿತು. ಲೌಕಿಕ ಸುಖಗಳ ಕಡೆಗೆ ಪರಿವೆಯೇ ಉಂಟಾಗುವದಿಲ್ಲ. ಸಾಂಪ್ರತ ಕಾಲದಲ್ಲಿ ಭಾರತೀಯರು ಐಹಿಕಸುಖದ ಸಾಧನಗಳೊಳಗೆ ತೀರ ಹಿಂದುಳಿದಿದ್ದಾರೆಂದು ಕಂಡುಬರುವ ಕಾರಣವಾದರೂ ಈ ವೇದ ವಿದ್ಯೆಯೇ ಸರಿ. ಪಾರಲೌಕಿಕ ಸುಖಾಪೇಕ್ಷೆಯೇ ಪ್ರಾಚೀನರ ಅಂತಿಮಸಾಧ್ಯವಾಗಿತ್ತು. ಇದೇಕಾರಣದಿಂದ ಈಗಲೂ ಅವರ ವಂಶಜರಾದ ನಾವು, ಅರ್ವಾಚೀನಕಾಲದ ಸುಖಸಾಧನಗಳಿಗೆ ಎರವಾಗಿರುವೆವು.

ವ್ಯಾಸರು ತಮ್ಮ ಅವತಾರಕಾರ್ಯವನ್ನು ಮುಗಿಸುವ ಸುಮಾರಿನಲ್ಲಿ ತಮಗೊಬ್ಬ ಸರ್ವೋತ್ತಮನಾದ ಮಗನು ಹುಟ್ಟಬೇಕೆಂಬ ಕಾಂಕ್ಷೆಯು ಅವರ ಮನಸ್ಸಿನಲ್ಲಿ ಅಂಕುರಿಸಿತು. ತಮ್ಮಂತೆ ತಮ್ಮ ಮಗನು ವಿದ್ವಾಂಸನೂ, ಸುಗುಣನೂ, ಶಾಂತನೂ, ಜಿತೇಂದ್ರಿಯನೂ, ಆಯುಷ್ಮಂತನೂ ಇರಬೇಕೆಂದು ಅವರು ಬಯಸಿದ್ದು ಸಹಜವು. ಯಾಕಂದರೆ ಸಾಮಾನ್ಯ ಮನುಷ್ಯರು ಸಹ ತಮ್ಮಂತೆ ತಮ್ಮ ಮಗನು ಆಗಬೇಕೆಂದು ಬಯಸುತ್ತಾರೆ. ಅರಸನು ತನ್ನ ಮಗನು ತನ್ನಂತೆ ಶೂರನಾಗಿ ರಾಜ್ಯವಾಳಬೇಕೆಂತಲೂ, ಪ್ರಧಾನಿಯು ತನ್ನ ಮಗನು ತನಗಿಂತಲೂ ಮುತ್ಸದ್ದಿಯಾಗಬೇಕೆಂತಲೂ ಬಯಸುತ್ತಾರೆ.

ಹೀಗಿರಲು ವ್ಯಾಸರಂಥ ಅಗಾಧಸತ್ವಶಾಲಿಗಳು ತಮ್ಮ ಮಗನು ಸಕಲವಿದ್ಯಾನಿಷ್ಣಾತನೂ, ಅಪಾರಜ್ಞಾನಸಂಚಿತನೂ ಆಗ ಬಯಸಿದ್ದು ಅರಿದಲ್ಲ. ತಪಶ್ಚರ್ಯದ ಯೋಗದಿಂದ ಬೇಕಾದ ಬಯಕೆಯನ್ನು ಪೂರ್ಣಮಾಡಿಕೊಳ್ಳಲಿಕ್ಕೆ ಬರುತ್ತದೆಂದು ಶಾಸ್ತ್ರಸಿದ್ಧಾಂತವಿರುವದು. ಇದನ್ನು ನೆನಪಿನಲ್ಲಿ ತಂದು ವ್ಯಾಸಮುನಿಗಳು ಪುತ್ರೇಚೆಯಿಂದ ತಪಸ್ಸು ಮಾಡಲುದ್ಯುಕ್ತರಾದರು. ಮೇರುಪರ್ವತದ ರಮಣೀಯವಾದ ಶಿಖರವು ಈ ಕೆಲಸಕ್ಕೆ ತಕ್ಕದಾಗಿತ್ತು. ಯಾಕಂದರೆ ಆ ಸ್ಥಳವು ಜನರಹಿತವಾದುದರಿಂದ ಸ್ವಾಭಾವಿಕವಾಗಿಯೇ ಶಾಂತವಾಗಿತ್ತು. ಜನರ ಸಂದಣಿಯಲ್ಲಿ ಮನಸ್ಸು ಕ್ಷಣಕ್ಷಣಕ್ಕೆ ವಿಕಲ್ಪವಾಗುತ್ತಿರುತ್ತದೆ. ಅಂಥಾದ್ದೇನೂ ಈ ನಿರ್ಜನ ಪ್ರದೇಶದಲ್ಲಿ ಆಗುವ ಭಯವಿರುವದಿಲ್ಲ. ಈ ಭಯವಿಲ್ಲದಿದ್ದರೂ ಸಿಂಹ,

ಶಾರ್ದೂಲ, ಹುಲಿ, ಹಾವು ಮೊದಲಾದ ಉಗ್ರಪ್ರಾಣಿಗಳ ಹೆದರಿಕೆಯು ಇಂತಹ ಘೋರಾರಣ್ಯದಲ್ಲಿ ಇರುವದು ಸ್ವಾಭಾವಿಕವು. ಆದರೆ ಆತ್ಮವತ್ ಸರ್ವಭೂತಾನಿ (ತನ್ನಂತೆ ಸಕಲ ಪ್ರಾಣಿಗಳು) ಎಂದು ಭಾವಿಸಿದ ವ್ಯಾಸರಂಥ ಪ್ರಾಜ್ಞರಿಗೆ ಆ ಕ್ರೂರಪ್ರಾಣಿಗಳ ಅಂಜಿಕೆಯು ಎಳ್ಳಷ್ಟೂ ಇರಲಾರದು. ಅದರಿಂದ ಭಯಂಕರವಾದ ಆ ಅರಣ್ಯವು ಕಾರುಣ್ಯ ಪೂರ್ಣವಾದ ಪ್ರಾಣಿಗಳಿಂದ ತುಂಬಿದ ಉಪವನದಂತೆ ಅವರಿಗೆ ಅನುಕೂಲವಾಗಿತ್ತು. ಪೃಥ್ವಿ, ನೀರು, ತೇಜಸ್ಸು, ವಾಯು, ಆಕಾಶ ಈ ಪಂಚ-ಮಹಾಭೂತಗಳಂಥ ಘನವೀರ್ಯವುಳ್ಳ ಮಗನು ತಮಗುಂಟಾಗಬೇಕೆಂಬ ದೃಢಭಾವನೆಯಿಂದ ಆ ಏಕಾಂತಸ್ಥಾನದಲ್ಲಿ ನೂರು ವರ್ಷಗಳ ವರೆಗೆ ಬಹು ಕಠೋರವಾದ ತಪಸ್ಸು ಮಾಡಿದರು. ಅನ್ನ-ನೀರುಗಳ ಪರಿವೆ ಇಲ್ಲದೆ ಪರಮೇಶ್ವರನ ಗುಣಾನುವಾದದಲ್ಲಿ ಮಗ್ನರಾಗಿ ಹೋದುದರಿಂದ ಬಾಹ್ಯಸೃಷ್ಟಿಯಲ್ಲಿ ವರ್ತಿಸುತ್ತಿದ್ದ ಯಾವ ಸಂಗತಿಗಳೂ ವ್ಯಾಸರಿಗೆ ಗೊತ್ತಾಗಲಿಲ್ಲ. ತಾವು ತಪಶ್ಚರ್ಯಕ್ಕೆ ಆರಂಭಿಸಿ ಎಷ್ಟು ಕಾಲ ಕ್ರಮಿಸಿತೆಂಬ ಅರವು ಸಹ ಅವರಿಗಿದ್ದಿಲ್ಲ. ಇಂಥ ಅಪ್ರತಿಮ ತಪಸ್ಸಿನಿಂದ ಅವರ ಅಂಗಕಾಂತಿಯು ಮತ್ತಿಷ್ಟು ಹೆಚ್ಚಾಯಿತು. ಬಹಳ ಹೇಳುವದೇನು? ಅದು ಕಿಡಿಕಿಡಿಯಾದ ಕೆಂಡದಂತೆ ತೇಜಃಪುಂಜವಾಗಿ ಹೊಳೆಯಹತ್ತಿತು. ಇಂದ್ರಾದಿ ದೇವತೆಗಳು ಸಹ ಆ ತೇಜಸ್ಸನ್ನು ಸಹಿಸದಂತಾದರು. ಆಗ ಇದು ಸರ್ವಜ್ಞನಾದ ಪರಮೇಶ್ವರನಿಗೆ ಗೊತ್ತಾಗಿ, ಏಕನಿಷ್ಠೆಯಿಂದ ಮಾಡುವ ವ್ಯಾಸರ ತಪಕ್ಕೆ ಮೆಚ್ಚಿ ಅವರಿಗೆ ಅವನು ಪ್ರಸನ್ನನಾದನು. ಜಗದೀಶ್ವರನು ಪ್ರತ್ಯಕ್ಷವಾಗಿದ್ದರೂ ವ್ಯಾಸರಿಗೆ ಅದರ ಅರಿವೇ ಇರಲಿಲ್ಲ. ಯೋಗನಿದ್ರೆಯಲ್ಲಿದ್ದ ವ್ಯಾಸರೂಪದ ನಾರಾಯಣನನ್ನು ಶ್ರೀಶಂಕರನು (ಕೈಮುಟ್ಟಿ) ಎಚ್ಚರಗೊಳಿಸಿದನು. ತಮ್ಮ ಅಂತಃಕರಣದಲ್ಲಿ ಅನಂತಕಾಲದ ವರೆಗೆ ಹೊಳೆಯುತ್ತಿದ್ದ ಈಶ್ವರಮೂರ್ತಿಯು ಈಗ ಪ್ರತ್ಯಕ್ಷವಾಗಿಯೇ ನಿಂತಿರುವದನ್ನು ನೋಡಿ ವ್ಯಾಸರು ಆನಂದಪರವಶರಾದರು. ಅವರ ಕಣ್ಣೊಳಗಿಂದ ಆನಂದಾಶ್ರುಗಳು ದಳದಳನೆ ಸುರಿಯಹತ್ತಿದವು. ಕುತ್ತಿಗೆಯ ಶಿರವು ಉಬ್ಬಿ ಮಾತು ಬಾರದಾದವು. ತುಟಿಯು ಅದರಹತ್ತಿತು. ಮೈಯು ಕೆಂಬದಂತೆ ಅಚಲವಾಯಿತು ಪರಮೇಶ್ವರನನ್ನು ಪ್ರತ್ಯಕ್ಷಕಾಣುವ ಮಹಾತ್ಮರಿಗೇ ವ್ಯಾಸರಿಗಾದ ಈ ಸ್ಥಿತಿಯು ತಿಳಿಯುವದಲ್ಲದೆ, ನಮ್ಮಂಥ ಪಾಪಿಗಳಿಗೆ ತಿಳಿಯುವದೆಂತು? ಕೆಲಹೊತ್ತಿನಮೇಲೆ ವ್ಯಾಸರು ದೇವರ ಪಾದಕಮಲದಲ್ಲಿ ತಲೆಯನ್ನು ಇಟ್ಟು,—ದೇವಾ, ಉಮಾಧವಾ, ನನ್ನನ್ನು ಉದ್ಧರಿಸು. ಮೃಡಾನೀಪತಿಯೇ, ನನ್ನನ್ನು ಮೇಲಕ್ಕೆತ್ತು. ಕರುಣಾಳುವೇ, ನನ್ನನ್ನು ಕಾಪಾಡು. ಶಶಿಮೌಳಿಯೇ ನನ್ನ ಶಿರದಲ್ಲಿ ಶಾಂತವಾದ ವರದಹಸ್ತವಿಡು. ವಾಮದೇವಾ,

ವಿರೂಪಾಕ್ಷಾ, ವಿಶ್ವಮೂರ್ತಿ, ನಿನ್ನನ್ನು ವರ್ಣಿಸಲಿಕ್ಕೆ ವೇದಾದಿಗಳಿಗಾಗುವದಿಲ್ಲ. ಅಂಥಾದ್ದು ನನ್ನಿಂದೇನಾದೀತು, ಎಂದು ಅನನ್ಯ ಭಕ್ತಿಯಿಂದ ಈಶ್ವರನನ್ನು ಸ್ತುತಿಸಿದರು. ವ್ಯಾಸರ ಈ ಭಕ್ತಿಯನ್ನೂ ವಿನಯವನ್ನೂ ನೋಡಿ ಪರಮಾತ್ಮನಿಗೆ ಪರಮಾನಂದವಾಯಿತು.

ಬಳಿಕ ಶಂಕರನು ಅವರ ತಲೆಯಮೇಲೆ ವರದ ಹಸ್ತಗಳನ್ನಿಟ್ಟು ಮೇಲ ಕ್ಕೆಬ್ಬಿಸಿ,—ಅಪ್ಪಾ, ಸತ್ಯವತೀಪುತ್ರನೇ, ನಿನ್ನ ಈ ದೀರ್ಘ ತಪಶ್ಚರ್ಯೆಕ್ಕೆ ನಾನು ಪ್ರಸನ್ನನಾದೆನು. ನಾನು ಸರ್ವಜ್ಞನಿರುವದರಿಂದ ನಿನ್ನ ಇಷ್ಟಾರ್ಥವನ್ನು ಅರಿತಿರುವೆನು. ಸಾತ್ವಿಕನಾದಂಥ, ಅತ್ಯಂತ ತೇಜಸ್ವಿಯಾದಂಥ, ಕುಲದ ಕೀರ್ತಿಯನ್ನು ಕಾಯ್ದುಕೊಳ್ಳುವಂಥ, ಬುದ್ಧಿವಂತನಾದಂಥ ಒಬ್ಬ ಮಗನು ಬೇಗನೆ ನಿನಗಾಗುವನು, ಎಂದು ಹೇಳಿದನು. ಭಗವಂತನ ಈ ಮಾತುಗಳನ್ನು ಕೇಳಿ, ವ್ಯಾಸರು ಕೃತಜ್ಞರಾಗಿ,—ದೇವಾ, ಇಂದು ನಾನು ಧನ್ಯನಾದೆನು; ನನ್ನ ಜನ್ಮದ ಸಾಫಲ್ಯ ವಾಯಿತು; ನಾನು ಕೃತಕೃತ್ಯನಾದೆನು; ನನ್ನ ವಂಶಕಮಲವು ಇಂದು ಅರಳಿತು; ನನ್ನ ಪ್ರಯತ್ನದ ಫಲವು ನನಗೆ ದೊರೆಯಿತು. ನಿನ್ನ ವರಪ್ರಸಾದದಿಂದ ದೇವಾಧಿ ದೇವಾ, ಕೃತಾರ್ಥನಾದೆನು, ಎಂದು ಸ್ತೋತ್ರಮಾಡಿದರು. ಇಷ್ಟಾದ ಬಳಿಕ ವ್ಯಾಸರು ಉಮಾಪತಿಯ ಅಪ್ಪಣೆಯಂತೆ ತಮ್ಮ ಆಶ್ರಮಕ್ಕೆ ತೆರಳಿದರು. ಇತ್ತ ಶಂಕರನಾದರೂ ಕೈಲಾಸಗಿರಿಗೆ ಹೊರಟುಹೋದನು. ವ್ಯಾಸರು ತಮ್ಮ ಆಶ್ರ ಮಕ್ಕೆ ಹೊರಟುಬಂದು ಮೊದಲಿನಂತೆ ಅಗ್ನಿಸಂಪಾದನೆಗಾಗಿ ಅರಣಿಮಂಥನದ ಕೆಲಸದಲ್ಲಿ ತೊಡಗಿದರು ಆಗ ಕೆಳಗಿನ ವಿಚಾರತರಂಗಗಳು ಅವರಮನಸ್ಸಿನಲ್ಲಿ ಬರಹತ್ತಿದವು "ಅಗ್ನಿಯು ಉತ್ಪನ್ನವಾಗಬೇಕಾದರೆ, ಅರಣಿಯೂ ಮಂಥನದಂಡವೂ ಅವಶ್ಯವಾಗಿರಬೇಕು. ಇದೇ ಮೇರೆಗೆ ಪುತ್ರೋತ್ಪತ್ತಿಗಾದರೂ ಕ್ಷೇತ್ರರೂಪ ದಿಂದ ತಾಯಿಯೂ, ಬೀಜರೂಪವಾಗಿ ತಂದೆಯೂ ಇರಬೇಕಾಗುವದು. ಹೀಗಿ ರಲು, ನನಗೆ ಹೆಂಡತಿಯಿಲ್ಲ. ಪೂರ್ವವಯಸ್ಸಿನಲ್ಲಿ ನಾನು ಮದುವೆ ಮಾಡಿಕೊ ಳ್ಳಲಿಲ್ಲ. ಈಗ ವಿವಾಹಮಾಡಿಕೊಳ್ಳುವೆನೆಂದರೆ ಮುಪ್ಪಿನ ಮುದುಕನಿಗೆ ಹೆಣ್ಣು ಕೊ ಡುವವರಾರು? ಕೊಟ್ಟರೂ ಗುಣ-ರೂಪವತಿಯೂ, ಪತಿವ್ರತೆಯೂ ಆದ ಹೆಂಡತಿಯು ನನಗೆ ಹೇಗೆ ದೊರೆತಾಳು? ದೊರೆತರೂ ನನ್ನಂಥ ಜ್ಞಾನಿಯು ಸ್ತ್ರೀಯೆಂಬ ಸಂಕೋಲೆ ಯಲ್ಲಿ ಸಿಕ್ಕುವದು ಯಥಾರ್ಥವಾದೀತೇ? ಶಿವ ಶಿವಾ! ದಕ್ಷಳೂ ಸದ್ಗುಣಿಯೂ ಪುತ್ರವತಿಯೂ ಆದ ಸ್ತ್ರೀಯು ದೊರಕುವದೇ ಮೊದಲು ದುರ್ಲಭವಿರಲು, ನಾನು ಹೀಗೆ ಆಶಾತರಂಗಗಳಲ್ಲಿ ಮುಳುಗುವದೇಕೆ? ಶ್ರೀ ಶಂಕರನಂಥ ನಿಃಸ್ಪೃಹನಾದ ಸರ್ವಜ್ಞನೂ, ಶ್ರೀ ಕೃಷ್ಣನಂಥ ಮುತ್ಸದ್ದಿಯಾದ ಪರಮೇಶ್ವರನೂ ಕೂಡ ಸ್ತ್ರೀ

ಲಂಪಟರಾಗಿ ಮೋಹ ಪಾಶದಲ್ಲಿ ಬದ್ಧರಾಗಿರಲು, ನನ್ನಂಥ ಪಾಮರನ ಕಥೆಏನು? ಹೆಣ್ಣು, ಹೊನ್ನು, ಮಣ್ಣುಗಳು ಗೃಹಸ್ಥಾಶ್ರಮಿಗಳ ಮೂಲ ಧನಗಳಾಗಿವೆ. ಇವುಗಳ ಜೊಂಜಾಟದಲ್ಲಿ ಸಿಗಬಿದ್ದು ಕಷ್ಟ ಸೋಸುವದಕ್ಕಿಂತ ನನಗೆ ಮಗನಿಲ್ಲ ದಿದ್ದರೂ ಹಿತವೇ ಸರಿ. ಒಂದು ಲಗ್ನವಾದ ಮಾತ್ರದಿಂದ ಅನಂತಕಾಲದವರೆಗೆ ಮನುಷ್ಯನು ಪರತಂತ್ರನಾಗುವನು. ” ಹೀಗೆ ವಿಚಾರ ಮಾಡಿ ವ್ಯಾಸರು ಮದುವೆ ಮಾಡಿಕೊಳ್ಳುವ ಹಂಬಲವನ್ನು ಬಿಟ್ಟು ಅರಣಿಯಲ್ಲಿ ಮಥನಮಾಡಹತ್ತಿದರು.

ಇದೇ ಸಮಯದಲ್ಲಿ ಘೃತಾಚಿಯೆಂಬ ರೂಪಲಾವಣ್ಯಸಂಪನ್ನೆಯಾದ ಪ್ರಾಯದ ಅಪ್ಸರ ಕನ್ನಿಕೆಯೊಬ್ಬಳು ಅಕಸ್ಮಾತ್ತಾಗಿ ಅಲ್ಲಿಗೆ ಬಂದಳು. ಅವಳ ಮೋಹಕ ಮೂರ್ತಿಯನ್ನು ಕಂಡು, ವ್ಯಾಸರು ಚಂಚಲಚಿತ್ತರಾದರು. ಘೃತಾಚಿ ಯು ಮಾತ್ರ ತನ್ನೊಳಗೆ ತಾನೇ ಅಂದುಕೊಳ್ಳುತ್ತಾಳೆ. “ಮುನಿಗಳು ಸಂಸಾರ ನಿರಿ ಚ್ಛರು, ಪ್ರಪಂಚದ ಗಂಧವು ಸಹ ಅವರಿಗೆ ತಗಲಿರುವದಿಲ್ಲ. ನಾನು ಕಾಮ ಚೇಷ್ಟೆಯಿಂದ ಇಂಥವರ ಬಳಿಯಲ್ಲಿ ಬರತಕ್ಕದ್ದೇ ಇದ್ದಿಲ್ಲ. ಯಾರನ್ನು ಪ್ರೀತಿ ಸಬೇಕು? ಯಾರನ್ನು ಬಿಟ್ಟು ದೂರ ಇರಬೇಕು? ಎಂಬ ಸಾರಾಸಾರ ವಿಚಾರವು ನನ್ನಂಥ ಅಬಲೆಯರಿಗಿಲ್ಲದ್ದರಿಂದಲೇ ಇಂಥ ಪ್ರಮಾದಗಳು ನಮ್ಮಿಂದ ಘಟಿಸು ತ್ತವೆ. ಈ ಮಹಾತ್ಮನ ತಪಸ್ತೇಜವೆತ್ತ? ದುರುಳ ಮನುಷ್ಯರನ್ನು ಮೋಹ ಗೊಳಿಸುವ ನನ್ನ ಚೇಷ್ಟೆಎತ್ತ? ಆ ಮುನಿಶ್ರೇಷ್ಠರು ನನ್ನನ್ನು ಕಣ್ಣೆತ್ತಿ ನೋಡುವ ಮೊದಲೇ ನಾನು ಇಲ್ಲಿಂದ ಪಲಾಯನ ಮಾಡುವದು ಒಳಿತು; ಇಲ್ಲವಾದರೆ ಅವರ ಶಾಪದಿಂದ ಸುಟ್ಟು ಬೂದಿಯಾದೇನು? ”ಎಂದು ಮನಸ್ಸಿನಲ್ಲಿ ತಂದು ಅಲ್ಲಿಂದ ಹೊರ ಡುವ ಹವಣಿಕೆಯಲ್ಲಿದ್ದಳು. ಆದರೆ ಈ ಮೊದಲೇ ಆ ಮುನಿವರನು ಅವಳ ಮೋಹಪಾಶದಲ್ಲಿ ಸಿಕ್ಕಿಕೊಂಡದ್ದು ಆ ಪಾಪ ಅಪರೆಗೇನುಗೊತ್ತು? ನಾಡಾಡಿ ಗರಂತೆ ಮಹಾತಪಸ್ವಿಗಳೂ, ದೃಢನಿಶ್ಚಯಿಗಳೂ, ಇಂದ್ರಿಯನಿಗ್ರಹಿಗಳೂ ಆದ ವ್ಯಾಸಮಹರ್ಷಿಗಳು ಕ್ಷುಲ್ಲಕವಾದ ಕಾಮವಿಕಾರಕ್ಕೆ ಒಳಪಟ್ಟದ್ದು ಅನುಚಿತ ವೆಂದು ಮೇಲೇ ಕಾಣುತ್ತದೆ. ಆದರೆ ಸ್ತ್ರೀಮಾಯೆಯೇ ಇಂಥ ಅಗಾಧಸತ್ವ ದ್ದಿರುತ್ತದೆ. ಆದರೂ ವ್ಯಾಸರು ಅಸಾಮಾನ್ಯವಾದ ತಮ್ಮ ಮನಸ್ಸನ್ನು ಬಿಗಿಹಿ ಡಿದು ಎಚ್ಚರಗೊಂಡು ಹೀಗೆ ಅನ್ನುತ್ತಾರೆ—“ದೇವಾ, ಇಂದು ನನ್ನ ಅವಸ್ಥೆಯು ಹೀಗಾಗಲು ಕಾರಣವೇನು? ಭ್ರಾಂತಿಷ್ಠನಾಗಿ ಮೂರ್ಖಮನುಷ್ಯರಂತೆ ಹೊಲ್ಲದ ಹಾದಿಯನ್ನು ಹಿಡಿದೆನು. ಮುನಿಗಳಿಗೆ ಮನೋಧೈರ್ಯವೇ ಮೇಲಾದ ಸಾಧನವು. ಹೀಗಿದ್ದು ಅದು ಈಗೆಲ್ಲಿ ಅಡಗಿರಬಹುದು? ಮುಂಚಿನ ಶಾಂತಿ-ಸಮಾಧಾನಗಳೂ, ಬ್ರಹ್ಮಚರ್ಯಸಾಮರ್ಥ್ಯವೂ, ವೈರಾಗ್ಯವೂ ಇವುಗಳಲ್ಲಿ ಒಂದೂ ಈ ಹೊತ್ತಿನಲ್ಲಿ

ನನ್ನನ್ನು ಪಾವನಮಾಡಲಿಲ್ಲವಲ್ಲ! ವಿವೇಕತನದ ನೂತಂತೂದೂರೇ ಉಳಿಯಿತು. ವೇದ ಶಾಸ್ತ್ರಾಧ್ಯಯನಗಳನ್ನು ಮಾಡಿದ್ದು ಸಾರ್ಥಕವಾಗಲಿಲ್ಲ. ಪರಲೋಕಸಾಧನದ ಅನೇಕಮಾರ್ಗಗಳನ್ನು ಕಂಡು ಹಿಡಿದ ನಾನು, ಹೀಗೆ ಅನರ್ಥಪರಂಪರೆಯಲ್ಲಿ ಬಿದ್ದಿರಲು, ಅಂಥಜ್ಞಾನವು ಈ ಹೊತ್ತು ನನಗೇನೂ ಉಪಕಾರಮಾಡಲಿಲ್ಲವಲ್ಲ." ಹೀಗೆ ವ್ಯಾಸರು ಪಶ್ಚಾತ್ತಾಪಪಡುತ್ತ ವಿವೇಕಯುಕ್ತರಾಗಿ ಪುನಃ ತಮ್ಮ ಮಂಥನದ ಉದ್ಯೋಗಕ್ಕೆ ಹತ್ತಿದರು.

ಮಹರ್ಷಿಗಳು ತನ್ನನ್ನು ಕಂಡು ಹೀಗೆ ವ್ರತಭ್ರಷ್ಟರಾಗಿದ್ದದ್ದಕ್ಕೆ ಘೃತಾಚಿಯು ಮಿಡುಕಿ ನಾಚಿಕೆಯಿಂದ ತಲೆಬಗ್ಗಿಸಿದಳು. ತನ್ನ ಈ ಕೆಟ್ಟ ಖೋಡಿಸ್ವರೂಪವೇ ದೊಡ್ಡವರಿಗೆ ಮುಳುವು ಆಗಿರುತ್ತದೆಂತಲೂ, ಇಂಥವರ ದರ್ಶನವಾದ ಬಳಿಕ ಪಾಪಾತ್ಮಳಾದ ತಾನು ತನ್ನ ಜನ್ಮ ಸಾಫಲ್ಯಮಾಡಿಕೊಳ್ಳಬೇಕೆಂತಲೂ ಘೃತಾಚಿಯು ಹೆಣ್ಣು ಗಿಳಿಯ ರೂಪತಾಳಿದಳು. ತಮಗೆ ಭಯಪಟ್ಟು ಅಪ್ಸರೆಯು ಶುಕಿಯಾದದ್ದನ್ನು ನೋಡಿ ವ್ಯಾಸರು ಆಶ್ಚರ್ಯಚಕಿತರಾದರು. ಎಷ್ಟು ಧೈರ್ಯದಿಂದ ತಮ್ಮ ಮನಸ್ಸು ಬಿಗಿಹಿಡಿದರೂ, ಅವಳ ಹಳವಂಡು ಆ ಮಹನೀಯರಿಗೆ ಬಿಡಲೊಲ್ಲದು. ಆದರಿಂದ ಮತ್ತೆ-ಮತ್ತೆ ಆ ಗಿಳಿಯನ್ನು ನೋಡುತ್ತ, ಅತ್ತೊಮ್ಮೆ ಇತ್ತೊಮ್ಮೆ ತೂಗುವ ಜೋಕಾಲಿಯಂತೆ ಅವರ ಮನಸ್ಸು ಅಸ್ಥಿರವಾಯಿತು. ಮೊದಲಿನ ಮೋಹಕರೂಪವನ್ನು ತಪ್ಪಿಸಿ ಹೆಣ್ಣು ಗಿಳಿಯಾಗಿ ಅವಳು ಕುಳಿತರೂ, ಆ ಕಾಮವಿಕಾರವು ಮುನೀಶ್ವರರಲ್ಲಿ ಅನಿಷ್ಟಪರಿಣಾಮವನ್ನುಂಟು ಮಾಡದೆಬಿಡಲಿಲ್ಲ. ಆದರೂ ವ್ಯಾಸರು ಅತ್ತಕಡೆಗೆ ದುರ್ಲಕ್ಷಮಾಡಿ, ತಮ್ಮ ಅಗ್ನಿಮಥನದ ಕಾರ್ಯವನ್ನು ಜೋರಿನಿಂದ ಸಾಗಿಸಿದರು. ಆ ದಿನ ಎಷ್ಟು ಕಡೆದರೂ ಅಗ್ನಿಯು ಉತ್ಪನ್ನವಾಗಲೊಲ್ಲದು. ಇದರಿಂದ ವ್ಯಾಸರಿಗೆ ಬಗ ಕಡು ಖೇದವೆನಿಸಿತು. ಹಿಡಿದಕಾರ್ಯವನ್ನು ಕೊನೆಗಾಣಿಸದಿರುವದು ಅಧಮತನವು. ಉತ್ತಮರಾದವರು ಆರಂಭಿಸಿದ ಕೆಲಸವನ್ನು ಕಡೆಮುಟ್ಟಿಸದೆ ಬಿಡಲಾರರು. ಇದೇ ಮೇರೆಗೆ ವ್ಯಾಸರಾದರೂ ಬೇಕಾದಷ್ಟು ವಿಘ್ನ ಬಂದರೂ ಅಗ್ನಿಯು ಹುಟ್ಟುವತನಕ ಆ ಕೆಲಸವನ್ನು ಬಿಡಲೇ ಇಲ್ಲ. ಎಷ್ಟೋ ಹೊತ್ತಿನ ಮೇಲೆ ಅರಣಿಯಲ್ಲಿ ಬೆಂಕಿಬೀಳುವ ಲಕ್ಷಣವು ಕಂಡು ಬಂತು. ಅರಣಿಯಲ್ಲಿ ಅಗ್ನಿಯು ಬೀಳುವದೆಂಬ ಉಬ್ಬಿನಿಂದ ಅದರ ರಂಧ್ರವನ್ನು ಹಣಿಕಿನೋಡುತ್ತಾರೆ, ಅದರೊಳಗಿಂದ ಪ್ರತಿವ್ಯಾಸರೋ ಎಂಬಂತಿರುವ ಆಸದೃಶ ಸುಸ್ವರೂಪದಬಬ್ಬ ಬಾಲಕನು ಹೊರಬಿದ್ದನು. ಸುಲಕ್ಷಣಗಳುಳ್ಳ ಆ ಕೂಸಿನ ಮುಖವನ್ನು ನೋಡಿದ ಕೂಡಲೆ ವ್ಯಾಸರಿಗಾದ ಆನಂದವನ್ನು ಹೇಳಲಾಸಲ್ಲ. ಸಂತೋಷದ ಕಡಲೊಳಗೆ ಅವರು ಈಸಾಡಹತ್ತಿದರು. ಆ ಕೂಸಿನ ಬಾಲಸೂರ್ಯನಂತೆ ಹೊಳೆ

ಯುವನ್ನೈ ಕಾಂತಿಯು, ಅರಳಿದ ಕೆನ್ನೈದಿಲೆಯಂತೆ ಸಡಿದಾದ ಕಣ್ಣುಗಳು ಸಂಪಗೆಯ ತೆನೆಯಂತಿರುವ ನೆಟ್ಟನ್ನ ಮೂಗು, ಹವಳದ ಕುಡಿಗಳಂತೆ ಒಪ್ಪುವ ಕೆಂಪು ತುಟಿಯು, ಶಂಖ-ಚಕ್ರಾದಿ ಸಕಲ ಸುಲಕ್ಷಣಗಳಿಂದ ಯುಕ್ತವಾದ ಗುಲಾಬಿಯ ಬಣ್ಣವುಳ್ಳ ಅಂಗೈ-ಅಂಗಾಲುಗಳು, ಕೋಮಲವಾದರೂ ಗಂಭೀರವಾದ ಅಳುವ ಸ್ವರವು ಇವೆಲ್ಲವುಗಳನ್ನು ಕಂಡಾರೆಕಂಡು ಅವರಿಗಾದ ಆನಂದವು ನೆಲಮುಗಿಲು ಹಿಡಿಸದಾ ಯಿತು. ಸಂತೋಷದ ಸುಕಾಲವಾಯಿತು. ಜನ್ಮಜನ್ಮಾಂತರಗಳಲ್ಲಿ ಕಾಣ ದಂಥ ಸುಂದರನಾದ ಮಗನನ್ನು ಕಂಡು ಈಶ್ವರನ ಅಲೌಕಿಕವಾದ ಸಾಮರ್ಥ್ಯಕ್ಕೂ ಅಮೋಘವಾದ ವಾತ್ಸಲ್ಯಕ್ಕೂ ವ್ಯಾಸರು ಬೆರಗಾಗಿ ಮುಂದೇನು ಮಾಡತಕ್ಕ ದ್ದೆಂದು ಬುದ್ಧಿ ಸೂಸದೆ ಬೆಪ್ಪಾಗಿ ಕುಳಿತರು. ನೆರೆಮನೆಯವರನ್ನು ಕರೆಯಬೇಕೆಂ ದರೆ, ಅದು ನಿರ್ಮಾನುಷವಾದ ಅರಣ್ಯವು. ಹಾಲು-ಹಣ್ಣುಗಳನ್ನು ತರಲಿಕ್ಕೆ ತಾವೇ ಹೋಗಬೇಕೆಂದರೆ, ಇಂಥ ತೀರ ಎಳೆಕೂಸನ್ನು ಒಂಟಿಯಾಗಿ ಬಿಟ್ಟು ಹೋಗಬೇಕಾಗಿರುವದು. ಹೀಗೆ ಒಂದಿಲ್ಲೊಂದು ಅಸಂಖ್ಯ ವಿಚಾರಗಳು ಅವರ ಮನಸ್ಸಿನಲ್ಲಿ ಬರಹತ್ತಿದವು!

ದೇವರು ಕ್ರಿಮಿಕೀಟಕಾದಿಗಳನ್ನು ಸಹ ಸಲಹುತ್ತಿರುತ್ತಾನೆ. ಸಕಲ ಪ್ರಾಣಿಗಳ ಸಂರಕ್ಷಣದ ಹೊರೆಯು ಅವನಿಗಿದ್ದೇ ಇರುವದು. ಹೀಗಿದ್ದರೂ ವ್ಯಾಸರಂಥ ಜ್ಞಾನಿಗಳಿಗೆ ಸಹ ಮುಂದೆ ಈ ಕೂಸನ್ನು ಹೇಗೆ ಕಾಪಾಡಲೆಂಬ ಚಿಂತೆಯು ಬೆಂಬಳಿಸಿತು, ಇದು ಸೋಜಿಗವೇ ಸರಿ! ಹೀಗೆ ಅವರು ಚಿಂತೆಮಾಡುತ್ತ ಕುಳಿತಿರು ವಷ್ಟರಲ್ಲಿ ಹಾಲು, ತುಪ್ಪ, ಜೇನತುಪ್ಪ, ದರ್ಭೆ, ಆಕಳು ಮುಂತಾದ ಶಿಶುಸಂರಕ್ಷ ಣದ ಸಂಭಾರಗಳನ್ನು ಸಂಗಡ ತೆಗೆದುಕೊಂಡು ವನದೇವತೆಯು ಅಲ್ಲಿಗೆ ಬಂದಳು. ತಕ್ಕ ಪ್ರಸಂಗದಲ್ಲಿ ತನಗೆ ನೆರವಾದಳೆಂದು ತಿಳಿದು ವನದೇವತೆಯನ್ನು ವ್ಯಾಸರು ತುಂಬಾ ಹೊಗಳಿ, ಅವಳ ಈ ಉಪಕಾರಕ್ಕೆ ಬಹುಸಂತೋಷಬಟ್ಟರು. ಇಂಥ ಉಪಕಾರಗಳೇ ಪ್ರಾಣಿಗಳನ್ನು ಮೋಹಪಾಶದಲ್ಲಿ ಕೆಡಹುತ್ತವೆ. ತಾನು ಮಾಡಿಸಿಕೊಂಡ ಉಪಕಾರತೀರಿಸಬೇಕಾದರೆ ಪ್ರತ್ಯುಪಕಾರಮಾಡಲಿಕ್ಕೆ ಬದ್ಧನಾಗ ಬೇಕಾಗುತ್ತದೆ. ಈ ನಿಯಮವು ತ್ರಿಕಾಲಾಬಾಧಿತವೆಂದು ಹೇಳಬೇಕು. ನಮ್ಮನ್ನು ಹಡೆದ ತಾಯಿಯು ಒಂಬತ್ತು ತಿಂಗಳು ಹೊತ್ತು ಹಡೆದು, ಹೊತ್ತು ಹೊತ್ತಿಗೆ ಹಾಲು ಹಾಕಿ, ಮೊಲೆಯುಣಿಸಿ, ನಾವು ದೊಡ್ಡವರಾಗುವವರೆಗೆ ಅನೇಕ ಕಷ್ಟ ಗಳನ್ನು ಸೋಸಿ, ನಮ್ಮನ್ನು ಕಾಪಾಡಿ ಅನಂತವಾದ ಉಪಕಾರಗಳನ್ನು ಮಾಡಿ ದ್ದಾಳೆ. ಇದು ನೆನಪಾದಕೂಡಲೆ, "ಮಾತೃದೇವೋಭವ" (ತಾಯಿಯನ್ನು ದೇವರೆಂದು ತಿಳಿ.) ಎಂಬ ಬಂಧನವು ನಮ್ಮ ಬೆನ್ನು ಹತ್ತುವದು. ತಂದೆಯು ನಮಗೆ

ಬೇಡಿದ್ದನ್ನು ಕೊಟ್ಟ, ನಮ್ಮ ಬಯಕೆಗಳನ್ನು ಪೂರ್ಣಮಾಡಿ, ವಿದ್ಯೆಗಲಿಸಿ ಕಾಪಾಡಿದ ಪ್ರಸಂಗವು ಸ್ಮರಣೆಯಲ್ಲಿ ಬಂತೆಂದರೆ, ‘ಪಿತೃದೇವೋಭವ’(ತಂದೆಯನ್ನು ದೇವರೆಂದು ಎಣಿಸು.)ಈಪಾಠವು ನಮಗೆ ಗಂಟು ಬೀಳುವದು. ಇದೇಮೇರೆಗೆ ಗುರು-ಹಿರಿಯರು, ಅಂಣ-ತಮ್ಮ, ಅಕ್ಕ-ತಂಗಿ, ಬೀಗರು-ಬಿಜ್ಜರು, ನೆರೆ-ಹೊರೆ, ಮುಂತಾದವರ ಬಂಧನವೂ ನಮ್ಮ ಪಾಲಿಗೆ ಉಂಟಾಗುತ್ತದೆ. ತಂದೆ-ತಾಯಿಗಳು ನಮಗೆ ಉಪಕಾರ ಮಾಡೇಇಲ್ಲ, ತಾವು ಮಾಡತಕ್ಕ ಕರ್ತವ್ಯಗಳನ್ನು ಮಾಡಿದ್ದಾರೆ. ನಾವೇನು ಅವರಿಗೆ ಕಾಪಾಡಿರೆಂದು ದುಂಬಾಲ ಬಿದ್ದಿದ್ದೆವೋ? ಎಂದು ಧರ್ಮಲಂಡರು ಮಾತ್ರ ಅನ್ನುತ್ತಿರುತ್ತಾರೆ. ಅವರ ಈ ಮಾತು ಸರಿಯಲ್ಲ. ತಂದೆತಾಯಿಗಳಿಂದ ಉಪಕಾರವನ್ನು ಮಾಡಿಸಿಕೊಂಡು “ಹೊಳೆದಾಟಿದಮೇಲೆ ಅಂಬಿಗರ ಮಿಂಡ”ಎಂಬಂತೆ ಆಚರಿಸುವದು ಮನುಷ್ಯತ್ವದ ಲಕ್ಷಣವೇ ಅಲ್ಲ. ಹೆಂಡಿರ ಮೋಹಕ್ಕೆ ಮರುಳಾಗಿ ತಾಯಿತಂದೆಗಳನ್ನು ಅಲ್ಲಗಳೆಯುವವರಂತೂ ಅಮಾನುಷತನದ ಅಖಂಡ ಮೂರ್ತಿಗಳೆಂತಲೇ ಹೇಳಬೇಕಾಗುತ್ತದೆ. ಈ ಜಗತ್ತು ಹೀಗೇ ಪರಸ್ಪರ ಉಪಕಾರಗಳಿಂದ ನಿಬದ್ಧವಾಗಿರುತ್ತದೆ. ಇರಲಿ. ವನದೇವತೆಯು ತಂದ ಪದಾರ್ಥಗಳಿಂದ ವ್ಯಾಸರು ಆ ಕೂಸಿನ ಜಾತಕರ್ಮ ಸಂಸ್ಕಾರವನ್ನು ನೆರವೇರಿಸಿದರು. ದ್ವಿಜರಾದವರು ಈ ಸಂಸ್ಕಾರವನ್ನು ಮಾಡಲೇಬೇಕು. ಬಂಗಾರದ ಸೌಟಿಗೆ ತುಪ್ಪ-ಜೇನತುಪ್ಪಗಳನ್ನು ಸವರಿ ಹುಡುಗನ ಬಾಯಿಗೆ ಹಚ್ಚಿ ಸೀಪಿಸಬೇಕೆಂದು ಶಾಸ್ತ್ರವಿಧಾನವುಂಟು. ವ್ಯಾಸರಂತೂ ಉತ್ತಮೋತ್ತಮರಾದ ವೈದಿಕರು. ಆಂದಬಳಿಕ ಕೇಳುವದೇನು? ಅವರು ಕೂಡಲೆ ಜಾತಕರ್ಮ ಸಂಸ್ಕಾರವನ್ನು ಮಾಡಿದರು. ಬ್ರಾಹ್ಮಣರು ಮಾಡುವ ಈ ಸಂಸ್ಕಾರಗಳು ಆ ಕೂಸುಗಳಿಗೆ ತೇಜಸ್ಸನ್ನುಂಟುಮಾಡುವವು. ಈ ಸಂಸ್ಕಾರವು ಮುಗಿದಬಳಿಕ ಆ ವನದೇವತೆಯು ಕೂಸಿಗೆ ಎರೆದು, ಆಕಳಹಾಲು ಕುಡಿಸಿ, ಬೆಚ್ಚಗೆ ಹೊಚ್ಚಿ ಮಲಗಿಸಿ, ವ್ಯಾಸರ ಅಪ್ಪಣೆಯನ್ನು ತೆಗೆದುಕೊಂಡು ತನ್ನ ಸ್ಥಳಕ್ಕೆ ಹೊರಟುಹೋದಳು. ವ್ಯಾಸರಿಗೆ ಆಗ ಇದೆಲ್ಲ ಹೊಸ ಸೃಷ್ಟಿಯಂತೆ ಕಾಣಹತ್ತಿತು. ದೈವಯೋಗದಿಂದ ಪಡೆದ ಆ ಪುತ್ರನ ಯೋಗಕ್ಷೇಮದಲ್ಲಿ ವ್ಯಾಸರು ಕಾಲಹರಣ ಮಾಡಬೇಕಾಯಿತು. ಆ ಕೂಸನ್ನು ಮೇಲಿಂದಮೇಲೆ ನೋಡುವದು, ಅತ್ತರೆ ಅಳುವ ಕೌತುಕವನ್ನು ನಿರೀಕ್ಷಿಸುವದು, ನಿದ್ರೆಯಲ್ಲಿ ಒಮ್ಮಿಂದೊಮ್ಮೆ ಘಕ್ಕನೆ ಏಳಲಾಗಿ ಅದನ್ನು ನೋಡಿ ಆಲೋಚಿಸುವದು, ಹುಡುಗನ ಮೃದುವಾದ ಅಂಗೋಪಾಂಗಗಳನ್ನು ಹಿಡಿಹಿಡಿದು ಹಿರ್ರನೆ ಹಿಗ್ಗುವದು, ಇವೆಲ್ಲ ಪ್ರಾಪಂಚಿಕ ಸುಖ-ದುಃಖಗಳು ಅವರ ಬೆನ್ನಿಗೆ ಹತ್ತಿದವು. ಈ ಕೂಸಿಗೆ ತಾಯಿ ಇಲ್ಲದ್ದರಿಂದ ಎಲ್ಲ ಕೆಲಸಗಳನ್ನು ವ್ಯಾಸರೇಮಾಡಬೇಕಾ

ಯಿತು. ಹ್ಯಾಗೂ ಆಗ ಜನನಾಶೌಚ(ವೃದ್ಧಿ)ಇದ್ದದ್ದರಿಂದ ಹುಡುಗನ ಸಂರಕ್ಷಣೆಗೆ ತಾನಾಗಿಯೇ ಬಹಳ ಹೊತ್ತು ಸಿಕ್ಕಿತು. ಯಾಕಂದರೆ ಆಗ ನಿತ್ಯ-ನೈಮಿತ್ತಿಕ ಕೃತ್ಯಗಳು ಕಡಿಮೆಯಾಗಿದ್ದವು. ಹನ್ನೆರಡನೇದಿವಸದಲ್ಲಿ ಅಲ್ಲೇ ಸಮೀಪದಲ್ಲಿ ಹರಿಯುತ್ತಿರುವ ಗಂಗಾನದಿಗೆ ಆ ಕೂಸನ್ನು ಒಯ್ದು ಸ್ವಚ್ಛವಾಗಿಸ್ನಾನಮಾಡಿಸಿದರು. ಬಳಿಕ ಆ ಕೂಸನ್ನು ಒಂದು ಹಾಸುಗಲ್ಲಿನಮೇಲೆ ಕೃಷ್ಣಾಜಿನದಲ್ಲಿ ಮಲಗಿಸಿ, ಮೇಲಿಂದಮೇಲೆ ಆ ಕೂಸನ್ನು ನೋಡುತ್ತ ತಾವು ಸ್ನಾನ ಮಾಡಿದರು. ನೂತನವಾದ ಯಜ್ಞೋಪವೀತವನ್ನು(ಜನಿವಾರವನ್ನು)ಹಾಕಿಕೊಂಡರು. ಆ ಕೂಸಿನಹತ್ತರವೇ ಕುಳಿತು, ಪ್ರಾತಃಸಂಧ್ಯೆ, ಬ್ರಹ್ಮಯಜ್ಞ, ದೇವ-ಋಷಿ-ಪಿತೃ ತರ್ಪಣೆಗಳು, ಈಶ್ವರೋಪಾಸನೆ ಇವುಗಳನ್ನೆಲ್ಲ ಮುಗಿಸಿಕೊಂಡರು. ಇಷ್ಟರಲ್ಲಿ ಕೂಸಿನ ಹೊಟ್ಟೆಹಸಿದು ಅಳಹತ್ತಿತು. ಕೂಡಲೆ ವ್ಯಾಸರು ಮಗುವನ್ನೆತ್ತಿಕೊಂಡು ಆಶ್ರಮಕ್ಕೆ ಬಂದು ಅದಕ್ಕೆ ಆಕಳ ಹಾಲನ್ನು ಹಾಕಿ, ಹೊಯ್ಹಾಲಿನಿಂದ ಅದನ್ನು ಸಮಾಧಾನಗೊಳಿಸಿದರು. ಹಾಲುಕುಡಿದು ಆ ಕೂಸು ಅತ್ತಿತ್ತ ನೋಡುತ್ತ ತುಸುಹೊತ್ತಿನಲ್ಲಿ ಗಡದ್ದು ನಿದ್ದೆ ಮಾಡಹತ್ತಿತು. ಮಗು ಹುಟ್ಟಿದ ಹನ್ನೆರಡನೇ ದಿವಸದಲ್ಲಿ ನಾಮಕರಣ ಸಂಸ್ಕಾರಮಾಡಬೇಕೆಂದುಶಾಸ್ತ್ರಾಜ್ಞೆಯುಂಟು. ಅದೇಮೇರೆಗೆ ವ್ಯಾಸರು ತಮ್ಮ ಆಶ್ರಮದ ಸನಿಯದಲ್ಲಿರುವ ತಪಸ್ವಿಗಳನ್ನು ಕರೆತಂದು ನಾಮಕರಣ ಮಹೋತ್ಸವವನ್ನು ಯಥಾವಿಧಿಯಾಗಿ ಬೆಳಿಸಿದರು. ಈ ವ್ಯಾಸಪುತ್ರರ ಉತ್ಪತ್ತಿಗೆ ಶುಕಿಯು (ಹೆಣ್ಣು ಗಿಳಿಯು) ರೂಪತೊಟ್ಟ ಘೃತಾಚಿಯೆಂಬ ಅಪ್ಸರೆಯೇ ನಿಮಿತ್ತಳಾದಳೆಂದು ತಿಳಿದು ತಾಪಸಿಯರು ಆ ಕೂಸಿಗೆ ಶುಕನೆಂದು ಹೆಸರಿಟ್ಟರು. ಈ ಮಂಗಲ ಕಾಲದಲ್ಲಿ ಕೋಗಿಲೆಗಳು ಮಂಜುಳಸ್ವರದಿಂದ ಪಾಡಿದವು. ಹೂಗಿಡಗಳು ಪುಷ್ಪವೃಷ್ಟಿಯನ್ನು ಸುರಿಸಿದವು. ತಾಪಸೋತ್ತಮರೂ, ಮುನಿಕುಮಾರಿಯರೂ ಮಂಗಳಕರವಾದ ಅನೇಕ ಆಶೀರ್ವಾದಗಳನ್ನು ಆ ಕೂಸಿಗೆ ಇತ್ತರು. ಈ ಅಕಲ್ಪಿತವಾದ ಉತ್ಸವವನ್ನು ನೋಡಿ ವ್ಯಾಸರ ಕಂಣಿನಿಂದ ಆನಂದಾಶ್ರುಗಳು ಸುರಿದವು. ಹೀಗೆ ನಾಮಕರಣದ ಉತ್ಸವವು ನೆರವೇರಿದ ಬಳಿಕ ವ್ಯಾಸರು ಪ್ರೇಮ ಪುರಸ್ಸರವಾಗಿ ತಂದ ಗಡ್ಡಗೆಣಸುಗಳನ್ನು ಆ ತಾಪಸ-ತಪಸ್ವಿನಿಯರು ಸ್ವೀಕರಿಸಿ, ಅವರ ಆದರಾತಿಥ್ಯಕ್ಕೆ ಆನಂದಭರಿತರಾದರು. ಬಳಿಕ ಅವರು ಆ ಶಿಶುವಿನ ಸುಕುಮಾರತೆಯನ್ನೂ ಅವಯವಗಳ ಸೌಂದರ್ಯವನ್ನೂ ತಮ್ಮತಮ್ಮೊಳಗೆ ಹೊಗಳುತ್ತ ವ್ಯಾಸರ ಅಪ್ಪಣೆಯಿಂದ ತಮ್ಮ ತಮ್ಮ ತಪೋವನಗಳಿಗೆ ತೆರಳಿದರು. ಇತ್ತ ವ್ಯಾಸಪುತ್ರನಾದ ಶುಕಮುನಿಯು ಬಿದಿಗೆಯ ಚಂದ್ರನಂತೆ ದಿನಾಲುಬೆಳೆಯ ಹತ್ತಿದನು. ವ್ಯಾಸರು ಆರನೆಯ ತಿಂಗಳಲ್ಲಿ ಅವನಿಗೆ ಅನ್ನಪ್ರಾಶನವೆಂಬ ಸಂಸ್ಕಾರವನ್ನು ಸಾಂಗಗೊಳಿಸಿದರು. ಅದೇ

ವರ್ಷವೇ ಆ ಹುಡುಗನ ಚೂಡಾಕರಣ ಸಂಸ್ಕಾರವು ನೆರವೇರಿಸಲ್ಪಟ್ಟಿತು. ವರ್ಷ
ದೊಳಗಾಗಿಯೇ ಆ ಹುಡುಗನ ಬಾಯಿಯಿಂದ ಅಕ್ಷರಗಳು ಸ್ಪಷ್ಟವಾಗಿ ಹೊರಡ
ಹತ್ತಿದವು. ಮೂರು ಮೂರು ವರ್ಷಗಳಾದರೂ ರ, ಟ, ಫ ಎಂಬ ಅಕ್ಷರಗಳನ್ನು
ಸಹ ನುಡಿಯಲಾಗದ ಚೋಡಿ ಕೂಸುಗಳು ಈಗ ಎಷ್ಟೋ ಇರುವವು. ಆದರೆ ಈ
ನಮ್ಮ ಮುನಿಕುಮಾರನು ಮೂರು ವರ್ಷದಲ್ಲಿ ಕನ್ನೆ–ಮೂತ್ರಗಳಲ್ಲಿಯೂ ಕೂಡ ಹ
ಚ್ಚು ಕಡಿಮೆ ತೋರದಂತೆ ಶುದ್ಧವಾಗಿಯೂ, ಸ್ಪಷ್ಟವಾಗಿಯೂ ಮಾತಾಡಹತ್ತಿದನು.

## ೨ ಬೀಜದಂತೆ ಮೊಳಕೆ.

ಮಕ್ಕಳ ಬಾಲಲೀಲೆಯು ಎಷ್ಟು ಮನೋಹರವಿರುತ್ತದೆಯೋ ಅಷ್ಟೇ
ಮಹತ್ವವಾದದ್ದೂ ಇರುತ್ತದೆ. ‘ಮೂರುವರ್ಷದಬುದ್ಧಿ ನೂರುವರ್ಷದವರೆಗೆ
ಎಂಬ ಕನ್ನಡಗಾದೆಯಲ್ಲಿ ಆ ಮಹತ್ವದ ಎಲ್ಲ ಅರ್ಥವು ತುಂಬಿಕೊಂಡಿರುತ್ತದೆ
ಆಗಿನ ಸಹವಾಸದ ಪರಿಣಾಮವು ಹುಡುಗರಿಗೆ ಕೊನೆಗೂ ನಿಲ್ಲುವದು. ಈ ಶುಕ
ಮುನಿಗಳಿಗೆ ತಾತಂದಿರಾದ ವ್ಯಾಸರೂ, ತಾವಿರುವ ತಪೋವನವೂ ಸಹವಾಸದ
ಮುಖ್ಯ ವಸ್ತುಗಳಾಗಿದ್ದವು. ಈ ಬಾಲಕನು ಕುಶಾಗ್ರಬುದ್ಧಿಯುಳ್ಳವನಾದ್ದ
ರಿಂದ ಮೂರುವರ್ಷದ ವಯಸ್ಸಿನಿಂದಲೇ ತಂದೆಯ ಅನುಕರಣವನ್ನು ತಪ್ಪದೆ
ಮಾಡತೊಡಗಿದನು. ವ್ಯಾಸರು ಪಂಚಸಂಚ ಉಷಃಕಾಲಕ್ಕೆ ಎದ್ದು ಪ್ರಾತ
ಕರ್ಮಗಳನ್ನು ನೆರವೇರಿಸುತ್ತಿದ್ದರು. ಈ ಮುನಿಕುಮಾರನಾದರೂ ಅಷ್ಟೇ
ರಾತ್ರಿಯಲ್ಲಿ ಎದ್ದು ಅವರಂತೆ ಮುಖಮಾರ್ಜನಾದಿ ಕೆಲಸಗಳನ್ನು ತೀರಿಸುತ್ತಿ
ದ್ದನು. ತಂದೆಯ ಕೂಡ ಗಂಗಾತೀರಕ್ಕೆ ಹೋಗಿ ಅವರಕೂಡ ಸ್ನಾನಮಾಡಿ
ಅವರ ಸಂಧ್ಯಾದಿ ಕರ್ಮಗಳು ಮುಗಿಯುವತನಕ, ಅವರು ತೋರಿಸಿದ ಹಾಸು
ಲ್ಲಿನ ಮೇಲೆ ಕೃಷ್ಣಾಜಿನವನ್ನು ಹೊತ್ತುಕೊಂಡು ಸುಮ್ಮನೆ ಕೂಡ್ರುದನು
ತಂದೆಯವರು ‘ಹರಿ ಹರಿ, ರಾಮ ರಾಮ, ಕೃಷ್ಣ ಕೃಷ್ಣ’ ಎಂದು ಅಂದಕೂ
ಡಲೆ ತಾನೂ ಅವರಂತೆ ಅನ್ನುವನು. ವ್ಯಾಸರ ನಿತ್ಯ ಕೃತ್ಯಗಳು ಮುಗಿದಕೂ
ಡಲೆ ಶುಕಮುನಿಯು ಕೃಷ್ಣಾಜಿನವನ್ನು ಸುರಳಿಮಾಡಿ ಬಗಲೊಳಗೆ ಇಟ್ಟು
ಕೊಂಡು, ತಂದೆಯ ಮುಂದೆ ಗಂಗೋದಕದಿಂದ ತುಂಬಿದ ಚಿಕ್ಕಗಿಂಡಿಯನ್ನು
ಇಲ್ಲವೆ ಚಿಕ್ಕ ಕಮಂಡಲುವನ್ನು ಹಿಡಕೊಂಡು ದುಡು ದುಡು ನಡೆಯುವನು
ಒತ್ತರದಿಂದ ನಡೆಯುವಾಗ ಒಮ್ಮೊಮ್ಮೆ ಕಾಲು ತೊಡಕು ಹಾಕಿಕೊಂಡು ದಪ್ಪ
ಬೀಳುವನು. ಮತ್ತೆ ಸಾವರಿಸಿಕೊಂಡು ಕೂಡಲೆ ಏಳುವನು. ಹೀಗೆಮಾಡುತ್ತ
ಆಶ್ರಮಕ್ಕೆ ಬರುವನು. ನದಿಯಿಂದ ಆಶ್ರಮವು ಸಮೀಪವಿತ್ತು. ಅವರಿಂ

ಹುಡುಗನನ್ನು ಎತ್ತಿಕೊಂಡು ಹೋಗುವ ಪ್ರಸಂಗವು ವ್ಯಾಸರಿಗೆ ಬರುತ್ತಿದ್ದಿಲ್ಲ. ಆಶ್ರಮದಲ್ಲಿ ಬಂದಕೂಡಲೆ ವ್ಯಾಸರು ಅಗ್ನಿಗೆ ಆಹುತಿಯನ್ನು ಕೊಡಬೇಕೆಂದು ಅಗ್ನಿಯನ್ನು ಪ್ರದೀಪ್ತ ಮಾಡಲಿಕ್ಕೆ ಹತ್ತುವರು. ಅದನ್ನು ತಿಳಿದು ತಂದೆಗೆ ಬೀಸಣಿಕೆಯನ್ನು ತಂದುಕೊಡುವದೂ, ಸಮಿಧಗಳನ್ನು ಅವರು ಬೇಡುವ ಮೊದಲೆ ತಂದಿಡುವದೂ, ಅವದಾನಕ್ಕಾಗಿ ಯವ (ಗೋಧಿ) ಮುಂತಾದ ಧಾನ್ಯಗಳನ್ನು ತೆಗೆದುಕೊಂಡು ಬರುವದೂ ಇವನ ಕೆಲಸಗಳಾಗಿದ್ದವು. ಈ ಕೆಲಸಗಳನ್ನು ಮಾಡುವಾಗಿನ ಆ ಹುಡುಗನ ಗೊಂದಲವನ್ನು ಹೇಳಲಾಸಲ್ಲ; ನಗುತ್ತ, ಅಳುತ್ತ, ಬೀಳುತ್ತ, ಏಳುತ್ತ ಎಲ್ಲಕೆಲಸಗಳಲ್ಲಿ ಮುಂದಾಳಾಗಿರುತ್ತಿದ್ದನು. ಪುತ್ರ-ವತ್ಸಲರಾದ ಪುಣ್ಯವಂತ ತಾಯಿ-ತಂದೆಗಳಿಗೆ ಅದನ್ನು ಹೇಳಲಾಸಲ್ಲ. ಹವನದ ವೇಳೆಯಲ್ಲಿ ಸಹ ಆ ಹುಡುಗನು, ಅತ್ತಿತ್ತ ತಿರುಗಲಿಕ್ಕೆ ಹೋಗದೆ ಹೋಮದ ಸರ್ವಕೃತಿಗಳನ್ನು ಲಕ್ಷ್ಯಪೂರ್ವಕವಾಗಿ ನೋಡುತ್ತ ಕೂಡ್ರುವನು. ಆಶ್ರಮದಲ್ಲಿ ತನ್ನಕೂಡ ಆಡಲಿಕ್ಕೆ ಹುಡುಗರಿಲ್ಲದಿದ್ದರೂ, ತಂದೆಯ ಹತ್ತರ ಬಂದು ಎಂದೂ ಕಿರಿ ಕಿರಿ ಮಾಡುತ್ತಿದ್ದಿಲ್ಲ. ತಮ್ಮ ಅಗ್ನಿಕಾರ್ಯವು ಮುಗಿದಕೂಡಲೆ ವ್ಯಾಸರು ಆದೇ ಆಗ ಹಿಂಡಿತಂದ ಆಕಳ ಹಾಲನ್ನು ಮಗುವಿಗೆ ಕುಡಿಸಿ, ಎಳೆ ಎಳೆ ಕಂದಮೂಲಗಳನ್ನು ತಿನಿಸಿ, ತಮ್ಮ ತೊಡೆಯಮೇಲೆ ಮಲಗಿಸಿಕೊಳ್ಳುತ್ತಿದ್ದರು. ತಾಪಸು ಅನ್ನುತ್ತಿರುವ ವೇದಘೋಷವನ್ನು ಕಿವಿಗೊಟ್ಟು ಕೇಳುತ್ತ, ಶುಕನು ನಿಯು ಅಕ್ಕರದಿಂದ ಅವರ ತೊಡೆಯ ಮೇಲೆಯೇ ನಿದ್ರೆ ಹೋಗುವನು. ಬ್ರಾಹ್ಮಣರು ಹಗಲಲ್ಲಿ ಮಲಗುವದು ನಿಷಿದ್ಧವು. ಆದರೂ ಆ ಋಷಿ-ಪುತ್ರನು ತೀರ ಚಿಕ್ಕವನೂ, ಸಂಸ್ಕಾರದಿಂದ ಬರತಕ್ಕ ಬ್ರಾಹ್ಮಣತ್ವವು ಇನ್ನೂ ಬಾರದವನೂ ಆದದರಿಂದ ಅವನಿಗೆ ಈ ಮಾತು ಕ್ಷಮ್ಯವೇ ಆಗಿತ್ತು. ಚಿಕ್ಕಂದಿನಲ್ಲಿಯೇ ಈ ಬಗೆಯ ವೇದಘೋಷವನ್ನು ಕೇಳುತ್ತ, ವೇದಮೂರ್ತಿಗಳಾದ ತಾತಂದಿರ ತೊಡೆಯಮೇಲೆ ಮಲಗುವ ಮಹತ್ ಪುಣ್ಯವು ಸಾಧಾರಣ ಮನುಷ್ಯರಿಗೆ ಲಭಿಸುವದೋ? ಒಂದು ಪ್ರಹರದ ವರೆಗೆ ಆ ಮುನಿಕುಮಾರನು ನಿದ್ರೆಮಾಡಿ ಬಳಿಕ ಎದ್ದು, ತೊಡೆಯಮೇಲೆಯೇ ವೇದವಾಣಿಯನ್ನು ಕೇಳುತ್ತ, ನಗುತ್ತ, ಕೆಲೆಯುತ್ತ, ಆಡುತ್ತ ಮಲಗುವನು.

ಅರುತಾಸು ಹೊತ್ತೇರಿದ ಕೂಡಲೆ, ತಂದೆಯನ್ನು ಬಿಟ್ಟು ಆ ಮುನಿಪುತ್ರನು ಆಶ್ರಮದಲ್ಲಿ ಆಡಲಿಕ್ಕೆ ಹೋಗುವನು. ಮೊದಲೆ ಋಷ್ಯಾಶ್ರಮವು ಮನೋಹರವು, ಅದರಲ್ಲಿ ವ್ಯಾಸಾಶ್ರಮವನ್ನು ಏನು ಹೇಳತಕ್ಕದ್ದು? ಆ ಆಶ್ರಮದಲ್ಲಿ ಅಲ್ಲಲ್ಲಿಗೆ ತೆಂಗು, ಅಡಿಕೆ, ಮಾವು, ಬಿಲ್ವ, ಬಾಳೆ ಮುಂತಾದ ಗಿಡಗಳೂ,

ಲವಂಗದ ಬಳ್ಳಿಯಂಥ ಬಗೆಬಗೆಯ ಬಳ್ಳಿಗಳೂ, ಮಲ್ಲಿಗೆಯ ಮಂಟಪಗಳೂ,
ತುಳಸಿಯ ಬನಗಳೂ ಒಪ್ಪುತ್ತಿರುವವು. ಇವೆಲ್ಲವುಗಳಿಂದ ದಟ್ಟವಾದ ನೆರಳು
ಆಶ್ರಮದ ತುಂಬೆಲ್ಲ ಹಬ್ಬಿಗೊಂಡಿತ್ತು. ಆಶ್ರಮದ ಸುತ್ತು-ಮುತ್ತು ತರತ
ರದ ಹಣ್ಣಿನ ಗಿಡಗಳನ್ನೂ ಹೂವಿನ ಬಳ್ಳಿಗಳನ್ನೂ ಹಚ್ಚಿದ್ದರು. ಕೋಲಸಂಪಗೆ
ಯಂಥ ಹೂವಿನ ದೊಡ್ಡ ದೊಡ್ಡ ಮರಗಳಂತೂ ಹೇರಳವಾಗಿದ್ದವು. ಸುತ್ತು-
ಮುತ್ತು ಬೆಳೆದ ಕೇದಗೆಯ ಬನಗಳಿಂದ ಆಶ್ರಮಕ್ಕೆ ತಾನಾಗಿಯೇ ಬೇಲಿಯನ್ನು
ಹಚ್ಚಿದಂತಾಗಿರುವದು ಆ ಕೇದಗೆಯ ಹೊಡೆಗಳಿಂದ ಉದುರಿದ ಹುಡಿಯೂ,
ಗಾಳಿಗೆ ಹಾರಿಬಿದ್ದ ಅರಳಿದ ಹೂಗಳೂ, [ಉದುರಿಬಿದ್ದ ಹಣ್ಣೆಲೆಗಳೂ] ಆಶ್ರಮದ
ನೆಲವನ್ನು ಮುಚ್ಚಿ, ಆ ಆಶ್ರಮವನ್ನು ಲಕ್ಷ್ಮಿಗೆ ಅರಿಸಿನ ಬಣ್ಣದ ಪಟ್ಟೆಪತ್ರಿಯನ್ನು ಉಡಿ
ಸಿಸಿದಂತೆ ಮಾಡಿದ್ದವು. ಆ ಹೂವಿನ ಸುವಾಸನೆಯಿಂದಲೂ, ಗುಗ್ಗಳಗಿಡಗಳ
ತನಿಗಂಪಿನಿಂದಲೂ, ಚಂದನತರುಗಳ ಇನಿಗಂಪಿನಿಂದಲೂ, ಪುನುಗಿನಬೆಕ್ಕುಗಳ
ಮೈಗಂಪಿನಿಂದಲೂ, ಅಗ್ನಿಯೊಳಗೆ ಹಾಕಿದ ಹೋಮದ್ರವ್ಯಗಳ ಬಲುಗಂಪಿನಿಂ
ದಲೂ ಆಶ್ರಮವೆಲ್ಲ ಘಮಘಮಿಸುತ್ತಿತ್ತು. ಅಕಸ್ಮಾತ್ತಾಗಿ ಬಂದ ಅತಿಥಿಗ
ಳಿಗೆ ದಣುವಾರಿಸಕೊಳ್ಳಲಿಕ್ಕೆಂದು ಅಲ್ಲಲ್ಲಿಗೆ ಚಿಕ್ಕ ಚಿಕ್ಕ ಕಟ್ಟೆಗಳನ್ನು ಕಟ್ಟಿ, ಅವು
ಗಳ ಮೇಲೆ ಚರ್ಮಾಸನಗಳನ್ನು ಮಾಡಿಸಿದ್ದರು. ಆ ಕಟ್ಟೆಗಳ ಸಮೀಪವಾಗಿ
ನೀರಿನ ಝರಿಗಳೂ, ಆ ಝರಿಗೆ ಹತ್ತಿಯೇ ಹಣ್ಣಿನಗಿಡಗಳೂ, ಆ ಗಿಡಗಳ
ಲ್ಲಿಯೇ ಬಂದವರಿಗೆ ಬೇಡದೆ ಅಗ್ರಹಮಾಡಿ ಹಣ್ಣುಹಂಪಲಗಳನ್ನು ತಂದು ನೀ
ಡುವ ಮಂಗಗಳೂ ಇರುತ್ತಿದ್ದವು. ನಿಮಿತ್ತವಿಲ್ಲದೆ ಸತ್ಕಾರಮಾಡುವ ಮನ
ಸ್ಸುಳ್ಳ ಆಗಿನ ಆರ್ಯರೆತ್ತ? ಯಾರಾದರೂ ಅಪ್ಪಿದಪ್ಪಿ ಮನೆಗೆ ಬಂದರೆ, ಮೂಗು
ಮುರಿಯುವ ಅದೇ ಆರ್ಯವಂಶಜರಾದ ಈಗಿನ ನಾವೆತ್ತ? ಆಶ್ರಮದ ಒಂದು
ದಂಡೆಗಂತೂ ಪವಿತ್ರವಾದ ಭಾಗೀರಥಿಯ ತಟಾಕವು. ಹೀಗೆ ಪರಮ ಪಾವ
ನವೂ, ಅತಿ ರಮಣೀಯವೂ ಆದ ತಪೋವನದಲ್ಲಿ ಶುಕಮುನಿಯು ವಿಶ್ರಾಂತಿ
ಗಾಗಿ ತಂದೆಯನ್ನಗಲಿ ಬರಲಾಗಿ, ಆಶ್ರಮದಲ್ಲಿಯ ಚಿಗರೆಯ ಮರಿಗಳು ಆ ಬಾಲ
ಕನಮೈಗೆ ಹತ್ತಿದ ಹುಡಿಯನ್ನು ತಮ್ಮ ಮೃದುವಾದ ತಿಳುನಾಲಿಗೆಯಿಂದ ನೆಕ್ಕಿ
ಒರಿಸುವವು. ಈ ಹುಡುಗನಾದರೂ ಅವುಗಳ ಕುತ್ತಿಗೆಗೆ ತನ್ನ ಕೊರಳು ಹಚ್ಚಿ,
ಪ್ರೇಮದಿಂದ ಅವುಗಳನ್ನು ಅಪ್ಪಿಕೊಳ್ಳುವನು. ಆಕಳಕರುಗಳು ಬಾಲವೆತ್ತಿ ಜಿಗಿ
ದಾಡತೊಡಗಲು, ಅವುಗಳಂತೆ ತಾನೂ ಟಣ್ಣಟಣ್ಣ ಜಿಗಿದಾಡುವನು. ಸಾರಂ
ಗದ ಕೋಡುಹಿಡಿದು ಕುಣಿಯುವನು. ಅವುಗಳಿಗೆ ಅಕ್ಕರೆಯಿಂದ ಸಾವೆಯನ್ನೂ
ರಾಜಗಿರಿಯಕಾಳುಗಳನ್ನೂ ತಂದು ತಿನ್ನಿಸುವನು. ಮೈ ತುರಿಸಲು ಸಮೀಪಕ್ಕೆ

ಬಂದ ಆಕಳುಗಳ ಮೊಲೆಗೆ ಬಾಯಿಹಚ್ಚಿ ಗುಟು ಗುಟು ಅವುಗಳ ಮೊಲೆ ಕುಡಿಯುವನು. ಅವು ತಮ್ಮ ಕರುಗಳಂತೆ ಇವನಿಗೂ ಸುಮ್ಮನೆ ಕುಡಿಯಗೊಡುತ್ತಿದ್ದವು. ಎರಳೆಗಳ ಮರಿಗಳ ಮೇಲಂತೂ ಶುಕಮುನಿಯ ಪ್ರೇಮವು ಬಹಳ. ಇವು ಇರಿಯಲಿಕ್ಕೆಂದು ಗೋಣು ಕೆಳಗೆ ಮಾಡಿದಕೂಡಲೆ ತಾನೂ ಗೋಣು ಮುಂದು ಮಾಡಿ 'ಡೀ ಡೀ ಡಿಕ್' ಎಂದು ಅವಕ್ಕೆ ತಲೆಗೊಡುವನು. ಆದರೆ ಅವೇನೂ ಇರಿಯುತ್ತಿದ್ದಿಲ್ಲ. ಅವುಗಳಕೂಡ ಇವನ ಚಲ್ಲಾಟವನ್ನು ಹೇಳಲಾಸಲ್ಲ. ಇವನು ಹೇಗೆ ಮಾಡಿದರೂ ಆ ಮೃಗಗಳು ಸುಮ್ಮನಿರುತ್ತಿದ್ದವು. ಸುಳ್ಳು, ಸಿಟ್ಟು, ಹೊಟ್ಟೇಕಿಚ್ಚು, ಹಗೆತನ ಇವುಗಳ ಹೆಸರು ಸಹ ಇಲ್ಲದಂಥ ಆ ತಪೋವನದಲ್ಲಿ ಹೀಗಿರುವದು ಅರಿದಲ್ಲ! ಮೇಲಾಗಿ ಓರಿಗೆಯ ಪ್ರಾಣಿಗಳಕೂಡ ಗೆಳೆತನವು ಬೆಳದೇ ಬೆಳೆಯುತ್ತದೆ. ಗೆಳೆತನದಲ್ಲಿ ಅಪ್ಪಿದಪ್ಪಿ ತಪ್ಪಾದರೆ ಕಡಕೊಳ್ಳುವದು ಸಹಜವು.

ಹೀಗೆ ಆಡುತ್ತಾಡುತ್ತ ಒಂಬತ್ತು ತಾಸು ಹೊತ್ತು ಕಳೆದುಹೋಗುವದು. ಇತ್ತ ವ್ಯಾಸರಾದರೂ ತಮ್ಮ ಅಧ್ಯಯನವನ್ನು ಮುಗಿಸಿಕೊಂಡು, ದರ್ಭೆ, ಸಮಿಧಗಳನ್ನು ತರುವದಕ್ಕಾಗಿ ಹೊರಡುವರು. ಈ ಸಂಧಿಯನ್ನು ಸಾಧಿಸಿ ಆ ಶುಕಬಾಲಕನು ಅವರಿಗಿಂತ ಮುಂದೆಯೇ ಬಂದು, ಒಂದು ಸಣ್ಣ ಕೊಯ್ತವನ್ನು ಕೈಯಲ್ಲಿ ಹಿಡಿದುಕೊಂಡು ಬಿರಿ ಬಿರಿ ಓಡಹತ್ತುವನು. ತಂದೆಯು ಸಮಿಧಗಳನ್ನು ಕಡಿಯುತ್ತಿರುವಾಗ ಶುಕನು — ಅಪ್ಪಾ, ಉಳಿದ ಗಿಡಗಳನ್ನು ಬಿಟ್ಟುಕೊಟ್ಟು ಸಮಿಧಗಳಿಗಾಗಿ ಈ ಮುತ್ತಲ ಗಿಡವನ್ನೇ ಯಾಕೆ ಕಡಿಯುವೆ? ಆ ಮೆತ್ತನ್ನ ಹುಲ್ಲನ್ನು ಬಿಟ್ಟು ಈ ಬಿರುಸಾದ ಹುಲ್ಲನ್ನೇ (ದರ್ಭೆಯನ್ನೇ) ಯಾಕೆ ಕೊಯ್ದುಕೊಳ್ಳುವೆ? ಈ ಬಳ್ಳಿಯ ಹೆಸರೇನು? ಟಿಸಿಲೊಡೆದ ಕೋಡುಳ್ಳ ಈ ಪ್ರಾಣಿ ಯಾವದು? ಆಕಳದ ಬಾಲವು ಹೀಗೇಕೆ? ಚಿಗರಿಯ ಬಾಲವು ಉದ್ದ ಇಲ್ಲವಲ್ಲ! (ವ್ಯಾಸರು ಉತ್ತರಕೊಡದೆ ಸುಮ್ಮನಿದ್ದರೆ) 'ಊಹೂಂ, ಹೇಳೋ ಅಪ್ಪಾ ಹೇಳು! ಎಂದು ಮುದ್ದು ಬರುವ ಮಾತಿನಿಂದ ಅವರಿಗೆ ತಲೆಬೇಸರ ಹಿಡಿಸುವನು. ಆದರೂ ತಾನು ಕೇಳಿದ ಪ್ರಶ್ನಕ್ಕೆ ಅವರಿಂದ ಉತ್ತರ ತಕ್ಕೊಳ್ಳದೆ ಬಿಡಲಾರನು. ವಾಚಕರೇ, ಚಿಕ್ಕ ಮಕ್ಕಳು ತೊದಲು ಮಾತಿನಿಂದ ಏನಾದರೊಂದು ಸಂಗತಿಯನ್ನು ಕೇಳುವಾಗ ಎಷ್ಟು ತೊಂದರೆ ಕೊಟ್ಟರೂ ಯಾವ ತಂದೆಯು ಹೇಳದೇಬಿಟ್ಟಾನು? ವ್ಯಾಸರಂತೂ ಅವನು ಕೇಳಿದ್ದಕ್ಕೆ ಸಮಾಧಾನ ಹೇಳದೆ ಮುಂದಡಿ ಇಡುತ್ತಿದ್ದಿಲ್ಲ. ಎಲ್ಲ ತಾಯಿ-ತಂದೆಗಳಿಗೆ ಇಂಥ ಪುಣ್ಯವು ಲಭಿಸುವದು ಅಸಾಧ್ಯವೇ ಸರಿ!

ಇಷ್ಟಾದ ಬಳಿಕ ವ್ಯಾಸರು ಸಮಿಧಗಳನ್ನೂ, ದರ್ಭೆಗಳನ್ನೂ ಆಶ್ರಮಕ್ಕೆ ತಂದು ಪ್ರಮಾಣಕ್ಕೆ ಸರಿಯಾಗಿ ತುಂಡು ಮಾಡಿಟ್ಟುಕೊಳ್ಳುವರು. ಈ ಎಲ್ಲ ಕೆಲಸ

ಗಳಲ್ಲಿ ನಮ್ಮ ಪುಟ್ಟ ವ್ಯಾಸಪುತ್ರರು ಇರತಕ್ಕವರೇ? ಅವರು ತಮ್ಮ ಕೈಲಿಂದಾದಷ್ಟು ಕೆಲಸವನ್ನು ಮಾಡಲಿಕ್ಕೆ ಹೆಣಗುತ್ತಿದ್ದರು. ಇಷ್ಟೆಲ್ಲ ಆಗಬೇಕಾದರೆ ಹತ್ತು ತಾಸು ಹೊತ್ತು ಸಹಜವಾಗಿ ಆಗುವದು. ಬಳಿಕ ವ್ಯಾಸರು ಮಗುವನ್ನು ಮುಂದುಮಾಡಿಕೊಂಡು, ಸಾಯಂಸಂಧ್ಯಾವನೆಗಾಗಿ ಗಂಗಾನದಿಗೆ ಹೋಗುವರು. ಅಲ್ಲಿಗೆ ಹೋದಕೂಡಲೆ ಸಾಯಂಕಾಲದ ಸೋಜಿಗವಾದ ಸೃಷ್ಟಿಸೌಂದರ್ಯವನ್ನೂ, ಪಕ್ಷಿಗಳ ಕಿಲಕಿಲಾಟವನ್ನೂ, ಭೂಮಿಗೆಲ್ಲ ಬೇಗಡಿಯನ್ನು ಹಚ್ಚಿದಂತೆ ಹಳದೀಬಣ್ಣದಿಂದ ಹೊಳೆಯುವ ಎಳೆಬಿಸಿಲನ್ನೂ, ಕೆಂಪು ಕೆಂಡದಂತೆ ಗುಂಡಾಗಿ ಹೊಳೆಯುವ ಅಸ್ತಕಾಲದ ಸೂರ್ಯನನ್ನೂ, ಕ್ಷಣಕ್ಷಣಕ್ಕೆ ಅಡಗಿ ಕಡಿಮೆಯಾಗುತ್ತಿರುವ ಪ್ರಕಾಶವನ್ನೂ ನೋಡಿ, ಆ ಶುಕಮುನಿಗೆ ಬಲು ಸೋಜಿಗವೆನಿಸುತ್ತಿತ್ತು. ಇದಲ್ಲದೆ ಇವುಗಳನ್ನು ಹೀಗೆ ಯಾರು ಮಾಡುತ್ತಿದ್ದಾರು? ಪ್ರತಿದಿನವೂ ಒಂದೇಸವನೆ ಹೀಗೆ ಯಾಕೆ ಆಗುತ್ತಿದ್ದೀತು? ಅದೇ ಹಗಲು, ಅದೇ ರಾತ್ರಿ, ಮರಳಿ ಮರಳಿ ಬಂದೇ ಬರುತ್ತವೆ ಮತ್ತೆ ಮತ್ತೆ ಅದೇಹಕ್ಕಿ, ಅದೇ ಕಿಲಬಿಲಿ, ಪುನಃ ಪುನಃ ಅದೇ ನದಿ, ಅದೇ ನೀರು, ಅದೇ ಸ್ಥಾನ, ಅದೇ ಸಂಧ್ಯೆ ಇವೆಲ್ಲ ಚಮತ್ಕಾರಗಳನ್ನು ತಂದೆಯ ಮುಖದಿಂದ ಕೇಳವ ಉತ್ಸುಕತೆಯಿಂದ ಅತ್ತ ತಿರುಗಲು, ಅವರು ಸಂಧ್ಯೋಪಾಸನೆಗಾಗಿ ಕುಳಿತಿರುತ್ತಿದ್ದರು. ಆಗ ಅವರನ್ನು ಮಾತಾಡಿಸದೆ, ಪಿಟ್ಟನ್ನದೆ ಸುಮ್ಮನೆ ಕುಳಿತುಕೊಳ್ಳುವನು. ಆದರೂ ಜಗತ್ತಿನೊಳಗಿನ ಈ ಸೋಜಿಗಗಳನ್ನು ಮತ್ತೆ ನೋಡಿ, ಈ ಕಣ್ಕಟ್ಟಿನ ಆಟವನ್ನು ಯಾರು ಆಡುತ್ತಿದ್ದಾರು! ಎಂಬದನ್ನು ಅರಿತುಕೊಳ್ಳಬೇಕೆಂಬ ಹವಣಿಕೆಯು ಮಾತ್ರ ಆ ಶುಕನಿಗೆ ತಪ್ಪುವದಿಲ್ಲ. ಸಾತ್ವಿಕವಾದ ಆಹಾರ, ಸಾತ್ವಿಕವಾದ ಸ್ಥಿತಿ, ಸಾತ್ವಿಕ ಸಹವಾಸ, ಸಾತ್ವಿಕ ದರ್ಶನ ಇವೆಲ್ಲವುಗಳಿಂದ ಶುಕಮುನಿಯ ಮನಸ್ಸಿನೊಳಗೆ ಈ ಬಗೆ ಜಿಜ್ಞಾಸೆಯುಂಟಾದದ್ದು ಅರಿದಲ್ಲ. ಅದೇ ನಾವು ರಾಜಸ-ತಾಮಸ ಅನ್ನ, ರಾಜಸ-ತಾಮಸ ಸ್ಥಿತಿಯಲ್ಲಿರುವದು, ರಾಜಸ-ತಾಮಸ ಪ್ರಾಣಿಗಳ ನಿತ್ಯ ಸಹವಾಸ, ದಿನಾಲು ರಾಜಸ-ತಾಮಸ ಗುಣಗಳ ವಸ್ತುಗಳನ್ನೇ ನೋಡುವದು, ಇವೆಲ್ಲವುಗಳಿಂದ ನಾವು ರಾಜಸರೂ, ತಾಮಸರೂ ಆಗಿ ಧರ್ಮಕ್ಕೆ ಅಧರ್ಮವೆಂದೂ, ಅಧರ್ಮಕ್ಕೆ ಧರ್ಮವೆಂದೂ ತಿಳಿಯುತ್ತೇವೆ. ಇದರಿಂದ ನಮಗೆ ಅಂಥ ಗಹನ ವಿಚಾರಗಳು ಹೊಳೆಯುವದೇ ಇಲ್ಲ. ವ್ಯಾಸರ ಸಂಧ್ಯಾವಂದನೆಯು ಮುಗಿದರೂ ಶುಕಾಚಾರ್ಯರ ಸೃಷ್ಟಿಸೌಂದರ್ಯವನ್ನು ನಿರೀಕ್ಷಿಸುವದು ಮುಗಿಯುತ್ತಿದ್ದಿಲ್ಲ. ಇನ್ನೂ ತುಸುಹೊತ್ತು ಅಲ್ಲಿಯೇ ಇರಬೇಕೆಂದು ಶುಕಮುನಿಗೆ ಆಗುತ್ತಿತ್ತು. ಆದರೂ ಅವನು ಜನ್ಮಾರಭ್ಯ ತಂದೆಯ ಮಾತು ಮೀರಿನಡೆದವನಲ್ಲ; ಅವರ ಮನಸ್ಸು ನೋಯಿಸುವವನಲ್ಲ. ಆದರಿಂದ

ಅವರು ಹೊರಟಕೂಡಲೆ ಶುಕಮುನಿಯು ತನ್ನ ಮನಸ್ಸು ತಿರುಗಿಸಿ, ಅವರ ಬೆನ್ನುಹತ್ತಿ ಆಶ್ರಮಕ್ಕೆ ಬಂದು, ಹಾಲು-ಹಣ್ಣುಗಳನ್ನು ತಿಂದು, ಸುಖವಾಗಿ ಮಲಗುತ್ತಿದ್ದನು.

ವಾಚಕರೇ, ಈಶ್ವರನು ಯಾರು? ಅವನು ಎಲ್ಲಿ ಇರುವನು? ಮುಂತಾದವುಗಳನ್ನು ತಿಳಿಯುವಷ್ಟು ಜ್ಞಾನ ಶಕ್ತಿಯು ಆ ಮುನಿಕುಮಾರನಲ್ಲಿ ಇದ್ದಿಲ್ಲೆಂಬದು ಸರಿಯೇ! ಆದರೂ ವ್ಯಾಸರು ಅನ್ನುತ್ತಿದ್ದ ನಾಮಸ್ಮರಣ-ವೇದಘೋಷಗಳನ್ನು ಹಗಲಿರುಳು ಕೇಳಿ ಕೇಳಿ, ಒಂದು ಬಗೆಯ ದಿವ್ಯ ಸಂಸ್ಕಾರವು ಆ ಬಾಲಕನಿಗೆ ಆಗುತ್ತಿತ್ತು. ಅದರ ಮಹಾತ್ಮ್ಯೆಯೇ ಇದು. ಈ ಮಾತು ಅಶಕ್ಯವಲ್ಲ. "ಕೈ ತಪ್ಪಿ ಇಲ್ಲವೆ ಅರಿವುರವಿನಿಂದ ಬೆಂಕಿಯಮೇಲೆ ಕಾಲ ಬಿದ್ದರೂ ಬೆಂಕಿಯು ಅದನ್ನು ಸುಡದೆ ಬಿಡಲಾರದು." ಇದೇನ್ಯಾಯದಿಂದ ಶುಕಮುನಿಯು ಬಾಲಕನಾದರೂ ರಾಮಕೃಷ್ಣ ನಾಮಸ್ಮರಣಶ್ರವಣದಿಂದ ಅವನಲ್ಲಿ ಇಂಥ ವಿಚಿತ್ರವಾದ-ಅಗಾಧವಾದ ಜಿಜ್ಞಾಸೆಗಳು ಉತ್ಪನ್ನವಾದವು. ಕೇಳಿದಿರಾ, ವ್ಯಾಸಪುತ್ರರ ದಿನಚರ್ಯವು ಎಂಥ ಆನಂದಕರವಾಗಿತ್ತೆಂಬದನ್ನು! "ತಂದೆಯಂತೆ ಮಗ" ಎಂಬ ಮಾತು ಇಂಥವರಲ್ಲೇ ಒಪ್ಪುತ್ತದೆ. ಈಗಿನ ತಂದೆ-ತಾಯಿಗಳಲ್ಲಿ ಯಾರಾದರೂ ತಾವು ಸದ್ವರ್ತನದಿಂದ ನಡೆದು ತಮ್ಮ ಮಕ್ಕಳಿಗೆ ಮಾರ್ಗದರ್ಶಿಗಳಾಗುವರೋ? ಇಲ್ಲ ಈಗ ಅದಕ್ಕೆ ತಕ್ಕಂತೆ ಕಿಡಿಗೇಡಿಗಳು, ದಡ್ಡರೂ ಆದ ಹುಡುಗರು ಅನೇಕರಾಗಿರುವರು. ಗೃಹಶಿಕ್ಷಣವು ಎಲ್ಲ ವಿದ್ಯೆಗಳ ತಾಯಿಯೆಂದು ಒಬ್ಬ ವಿದ್ವಾಂಸನು ಹೇಳಿರುವನು. ಅವನ ಇಂಗಿತವೇನಂದರೆ ಮನೆಯ ಒಡೆಯರಾದ ತಂದೆ-ತಾಯಿಗಳು ಯಾವ ಮಾರ್ಗ ಹಿಡಿದು ಹೋಗುವರೋ, ಅದೇ ಮಾರ್ಗವನ್ನು ಅವರ ಮಕ್ಕಳು ತುಳಿಯುವರು. ಶಿಶುಗಳು ಇದೇ ಹೊಸದಾಗಿ ಜಗತ್ತಿನಲ್ಲಿ ಬಂದದರಿಂದಲೂ ತಂದೆ-ತಾಯಿಗಳಹತ್ತರವೇ ಅವರ ಬಾಲ್ಯವು ಹೆಚ್ಚಾಗಿ ಕಳೆದುಹೋಗುತ್ತಿರುವದರಿಂದಲೂ ಅನುಕರಣಮಾಡುವದರಲ್ಲಿ ತಂದೆ-ತಾಯಿಗಳ ಅನುಕರಣವನ್ನೇ ಅವು ಹೆಚ್ಚಿಗೆ ಮಾಡುವವು. ನೋಡಿರಿ, ವ್ಯಾಸರ ಅನುಕರಣದಿಂದ ಶುಕನು ಎಂಥ ಪದವಿಗೇರಿದನು! ಎಂಥ ಸತ್ವಶಾಲಿಯಾದನು!

## ೨ ಗುರುಕುಲವಾಸ.

ಶುಕಮುನಿಯ ಬುದ್ಧಿಯು ಬಹು ತೀಕ್ಷ್ಣವಾಗಿತ್ತು. ಐದುವರ್ಷದವನಾಗುತ್ತಲೆ ತಂದೆಯಂತೆ ತಾನೂ ಓದು ಬರಿಯಬೇಕೆಂತಲೂ, ಹೋಮ ಹವನಾದಿ ಕಾರ್ಯಗಳನ್ನು ಮಾಡಬೇಕೆಂತಲೂ ಅವನು ಹವಣಿಸಹತ್ತಿದನು. ಇದಲ್ಲದೆ, ಅವನು—

ಅಪ್ಪಾ! ನಿನ್ನಂತೆ ನನಗೆ ಜನಿವಾರ ಇಲ್ಲಲ್ಲ. ನೀವು ಮಂತ್ರವನ್ನನ್ನುತ್ತ ಅಗ್ನಿಯನ್ನು ಸುತ್ತುವರಿದು ಬರಬೇಕು, ನಾನುಮಾತ್ರ ಸಾಮಾನುತಂದಿಟ್ಟು ಸುಮ್ಮನೆ ಕೂಡ್ರಬೇಕು, ಎಂದು ಮುದ್ದುಮಾತಿನಿಂದ ತಂದೆಯನ್ನು ಕೇಳಹತ್ತಿದನು. ವ್ಯಾಸರು ಮಗನ ಇಚ್ಛೆಯನ್ನು ತಿಳಿದು ಅವನಿಗೆ ಐದರಲ್ಲಿ ಬಿದ್ದ ಕೂಡಲೆ ಚೈತ್ರಶುದ್ಧ ಪ್ರತಿಪದೆಯ ಶುಭಲಗ್ನದಲ್ಲಿ ಶ್ರೀಸರಸ್ವತೀ ಮೂರ್ತಿಯ ಪೂಜೆಯನ್ನು ಮಾಡಿಸಿ, 'ಶ್ರೀ ಗಣೇಶಾಯ ನಮಃ” ಎಂಬ ಅಕ್ಷರಗಳನ್ನು ಹಲಗೆಯಮೇಲೆ ಹಾಕಿಕೊಟ್ಟರು. ಮೊದಲೆ ವ್ಯಾಸಪುತ್ರನು ಅಲೌಕಿಕ ಬುದ್ಧಿಯುಳ್ಳವನು; ತುಸು ದಿವಸಗಳಲ್ಲಿಯೇ ಹಲಗೆಯ ಮೇಲಿನ ಬರಹವನ್ನೆಲ್ಲ ಮುಗಿಸಿದನು. ಅಂಕೆ-ಮೊಗ್ಗೆ ಮೊದಲಾದವುಗಳನ್ನೆಲ್ಲ ತೀರಿಸಿ, ಬೇಕಾದಂಥ ಬಿಗಿಯಾದ ಶಬ್ದವನ್ನು ಓದಲಿಕ್ಕೂ ಬರಿಯಲಿಕ್ಕೂ ಕಲಿತನು. ಮಗನ ವಿದ್ಯಾಗ್ರಹಣಕ್ಕೆ ಬೆರಗಾಗಿ, ವ್ಯಾಸರು ಉಪನಯನದ ಸೌಂಗೆಯನ್ನು ಬೇಗನೆ ಮಾಡಬೇಕಾಯಿತು. ಬ್ರಾಹ್ಮಣಪುತ್ರರ ಉಪನಯನಸಂಸ್ಕಾರವು ಐದನೆಯ ವರ್ಷದಲ್ಲಿ ಮಾಡಿದರೆ ಬ್ರಹ್ಮವರ್ಚಸ್ಸೆಂಬ ತೇಜವು ವಟುಗಳಲ್ಲಿ ಉಂಟಾಗುತ್ತದೆಂಬದು ವ್ಯಾಸರಿಗೆ ಗೊತ್ತಿದ್ದದ್ದೇ. ಕೂಡಲೆ ಅವರು ಸುರಗುರುಗಳಾದ ಬೃಹಸ್ಪತ್ಯಾಚಾರ್ಯರನ್ನು ಬರಮಾಡಿಕೊಂಡು, ಬಾಲಕನ ವ್ರತಬಂಧಕ್ಕಾಗಿಬಂದು ಸುಮುಹೂರ್ತವನ್ನು ನಿಶ್ಚಯಿಸಿದರು. ಶುಕರಂಥ ಉತ್ಕೃಷ್ಟ ವಿದ್ಯಾರ್ಥಿಯ ಆಚಾರ್ಯತ್ವವನ್ನು ವಹಿಸಲಿಕ್ಕೆ ಬೃಹಸ್ಪತ್ಯಾಚಾರ್ಯರು ಆನಂದದಿಂದ ಒಪ್ಪಿಕೊಂಡರು. ಅವರು ತಾವು ದೇವಲೋಕದಿಂದ ಬರುವಾಗಲೇ ಶುಕನ ಮುಂಜಿಗಾಗಿ, ದಂಡ, ಕಮಂಡಲು, ಕೌಪೀನ, ಕೃಷ್ಣಾಜಿನ ಮುಂತಾದ ದಿವ್ಯವಾದ ಉಪಕರಣಗಳನ್ನು ತಂದಿದ್ದರು.

ವ್ಯಾಸರ ಮನೆಯಮುಂಜಿಯ ಸಮಾರಂಭವನ್ನು ವರ್ಣಿಸತಕ್ಕದ್ದೇನು! ಜೈಮಿನಿ-ಯಾಜ್ಞವಲ್ಕ್ಯರಂಥ ಪ್ರಮುಖರಾದ ವ್ಯಾಸಶಿಷ್ಯರು ಗುರುಪುತ್ರರ ಉಪನಯನಕ್ಕಾಗಿ ಕರೆಸದೆ ತಾವಾಗಿಯೇ ಬಂದು, ಟೊಂಕ ಕಟ್ಟಿಕೊಂಡು ನಿಂತಿದ್ದರು. ಬೇರೆ ಆಶ್ರಮಗಳಿಂದಲೂ ತಾಪಸ-ತಾಪಸಿನಿಯರು ಕುಟುಂಬ ಸಮೇತರಾಗಿ ಬಂದು, ತಮ್ಮ ಮನೆಯ ಕೆಲಸದಂತೆ ಸಂತೋಷದಿಂದ ಸಕಲ ಸೌರಣೆಯನ್ನು ನಡೆಸಿದರು. ವ್ಯಾಸಾಶ್ರಮಕ್ಕೆ ಹೊಂದಿಯೇ ಗಂಗಾತಟಾಕದ ಕದಳೀವನದೊಳಗೆ ಉಪನಯನಕ್ಕಾಗಿ ಪ್ರಮಾಣಬದ್ಧವಾಗಿ ಒಂದು ಮಂಟಪವನ್ನು ಹಾಕಿದರು. ಅಲ್ಲಲ್ಲಿಗೆ ಬಾಳೆಯ ಕಂಬಗಳನ್ನು ನಿಲ್ಲಿಸಿ, ಪಂಚಪಲ್ಲವಗಳ ತೋರಣಗಳನ್ನೂ, ಸುಗಂಧಯುಕ್ತವಾದ ಪುಷ್ಪಮಾಲೆಗಳನ್ನೂ ಕಟ್ಟಿದರು. ಮಂಟಪದ ಮೇಲ್ಭಾಗಕ್ಕೆ ತೆಂಗು ಅಡಿಕೆಗಳ ಗರಿಗಳನ್ನು ಹಾಕಿ, ನಿಬಿಡಚ್ಛಾಯವಾಗುವಂತೆ ಮಾಡಿ, ಕೆಳ ಮಗ್ಗಲು

ಲ್ಲಲ್ಲಿಗೆ ತೆಂಗು, ಅಡಿಕೆ, ಬಾಳೆ, ಕಿತ್ತಳೆ, ರಸಾಲ, ಸಾಲ ಮುಂತಾದ ಗಿಡ
ಳ ಹಂಣು-ಕಾಯಿಗಳ ಗೊಂಚಲಗಳನ್ನೂ, ಹೂವಿನ ಮಂಜರಿಗಳನ್ನೂ ತೂಗ
ಟ್ಟಿದ್ದರು. ಕಂಬಕ್ಕೆ ಕಟ್ಟಿದ ಹಸರು ಸೋಗೆಯ ಕಬ್ಬುಗಳು ಗಾಳಿಗೆ ಅಲ್ಲಾಡಿ,
ತಿಥಿಗಳನ್ನು ಆನಂದೋತ್ಸವಕ್ಕೆ ಕರೆಯುತ್ತಿದ್ದವು. ಮುಂಜಿಗೆ ಬಂದ ತಪಸ್ವಿಗ
ಗೆ ಆನಂದವಾಗುವಂತೆ ಮಲ್ಲಿಗೆಯ ಬಳ್ಳಿಗಳು ತಮ್ಮ ಮೊಗ್ಗೆಗಳೆಂಬ ಅರಳುಗಳನ್ನು
ಹೋಗಿಬರುವವರಮೇಲೆ ಸುರಿಸುತ್ತಿದ್ದವು. ಜೇನ್ನೊಣಗಳು ಮಧುಪರ್ಕಕ್ಕಾಗಿ
ಮಧುವನ್ನೂ, ತೆಂಗುಗಳು ಎಳೆನೀರುಗಳನ್ನೂ, ಕಾಡಾಕಳುಗಳು ಬಾಲವೆಂಬ
ಚಾಮರಂಗಳನ್ನೂ, ಗಿಳಿ-ಕೋಗಿಲೆಗಳು ತಮ್ಮ ಸ್ವರವೆಂಬ ಮಂಗಳ ವಾದ್ಯ
ಳನ್ನೂ, ಬೇಕಾದಾಗ ಪೂರೈಸಲಿಕ್ಕೆ ಗುತ್ತಿಗೆ ಹಿಡಿದಿದ್ದವು. ಗೊತ್ತಾದ
ವಸ ನಿಶ್ಚಿತವಾದ ಸುಮುಹೂರ್ತದಲ್ಲಿ, ಉಪನಯನದ ಕೆಲಸವು ಸಾಗಿತು.
ಬೃಹಸ್ಪತ್ಯಾಚಾರ್ಯರ ಆಚಾರ್ಯತ್ವದ ಕೆಳಗೆ ಹೋಮ-ಹವನಾದಿ ಕಾರ್ಯಗಳು
ಶುಥಾವಿಧಿಯಿಂದ ಜರಗಿದವು. ವ್ಯಾಸರಂಥ ವೈದಿಕಧುರೀಣರು, ಸುರಗುರು
ಳಂಥ ಆಚಾರ್ಯರು, ಯಾಜ್ಞವಲ್ಕ್ಯ-ಜೈಮಿನಿಗಳಂಥ ಸರ್ವಜ್ಞರಾದ ಅವರ
ಷ್ಯರು, ಅಂದಬಳಿಕ ವೈದಿಕವಿಧಿಯು ಎಷ್ಟು ಸುಕ್ರಮವಾಗಿಯೂ, ಸಾಂಗೋಪಾಂ
ವಾಗಿಯೂ ನೆರವೇರಿದ್ದೀತೆಂಬದನ್ನು ವಾಚಕರೇ ಊಹಿಸಲಿ! ಇಂಥ ಅಪೂರ್ವ
ಾದ-ಅಸದೃಶವಾದ ಮಹೋತ್ಸವವನ್ನು ನೋಡಿ, ಯಾರಿಗೆ ಆನಂದವಾಗಲಿಕ್ಕಿಲ್ಲ!

ವ್ಯಾಸರಿಗಂತು ಆನಂದಸಾಗರವು ಉಕ್ಕೇರಿ ಹೋಗಿತ್ತು. ಅವರ ಕಣ್ಣು
ಗಳಿಂದ ಆನಂದಬಾಷ್ಪಗಳು ಅಮೂಲ್ಯವಾದ ಮುತ್ತುಗಳಂತೆ ಒಳಒಳನೆ ಉದುರಿ
ವು. ಉತ್ಸವಕ್ಕೆ ಬಂದ ಎಲ್ಲರಿಗೂ 'ಧನ್ಯ ಧನ್ಯ' ವೆನಿಸಿತು. ಯಾರಹೆಸರು
ಗೆದುಕೊಂಡ ಮಾತ್ರಕ್ಕೆ ಸಕಲ ಪಾಪಗಳ ಕ್ಷಾಲನವಾಗುವದೋ, ಅಂತಹ ಶುಕಾ
ಾರ್ಯರ ಉಪನಯನವನ್ನು ಕಣ್ಣಾರೆಕಂಡ ಪ್ರಾಣಿಗಳ ಪುಣ್ಯಾತ್ಮರಲ್ಲದೆ ಮತ್ತೇ
? ಹೀಗೆ ನಿರ್ವಿಘ್ನದಿಂದ ಯಥಾಶಾಂಗವಾಗಿ ಮಂಗಲಕಾರ್ಯವು ಸಮಾಪ್ತ
ಾದಬಳಿಕ, ವ್ಯಾಸರು ಎಲ್ಲ ಅತಿಥಿಗಳಿಗೂ, ಅಭ್ಯಾಗತರಿಗೂ, ಆಪ್ತ-ಮಿತ್ರ
ಗೂ ಅವರವರ ಯೋಗ್ಯತೆಗೆ ಸರಿಯಾಗಿ ಮಾನ-ಮರ್ಯಾದೆಮಾಡಿ ಅಪ್ಪಣೆ
ಟ್ಟರು. ಆ ಮೇಲೆ ವ್ಯಾಸರು ಮಗನನ್ನು ವೇದಶಾಸ್ತ್ರಗಳ ಅಧ್ಯಯನಕ್ಕಾಗಿ,
ಹಸ್ಪತ್ಯಾಚಾರ್ಯರ ಸ್ವಾಧೀನಮಾಡಿದರು. ಬೃಹಸ್ಪತ್ಯಾಚಾರ್ಯರು ಶುಕಮು
ಗಳಿಗೆ ಮಾಡಿದ ಅನಂತೋಪದೇಶವನ್ನು ಬರೆಯಲಿಕ್ಕೆ ನನ್ನಂಥ ಪಾಮರನಿಗೇ
ದೀತು? ಆದರೂ ಅಳಿಲಿಯ ಭಕ್ತಿಯಂತೆ ವಾಚಕರ ಸೇವೆಗಾಗಿ, ಇದರಡಿ
ಲ್ಲಿ ಅದನ್ನು ಅಲ್ಪಸ್ವಲ್ಪ ಕೊಡುವೆನು.

ಬೃಹಸ್ಪತ್ಯಾಚಾರ್ಯರು ಶುಕಮುನಿಗಳಿಗೆ ಮಾಡಿದ ಧರ್ಮೋಪದೇಶವು.

ಪ್ರಿಯಶಿಷ್ಯನೇ, ನಿನಗೆ ನಾನು ಹೆಚ್ಚಿಗೆ ಹೇಳುವದೇನೂ ಉಳಿದಿಲ್ಲ. ಎಲ್ಲ ವನ್ನು ನೀನು ಅರಿತವನೇ ಇರುತ್ತೀ. ಯಾಕೆಂದರೆ ನೀನು ದೊಡ್ಡವರಮಗನು, ದೊಡ್ಡವರ ಸಹವಾಸದಲ್ಲಿಯೇ ಬೆಳೆದವನು, ಮೇಲಾಗಿ, ಸಕಲ ಶಾಸ್ತ್ರಕಲಾ-ಪ್ರಣೇತೃಗರಾದ ವ್ಯಾಸರಲ್ಲಿ ನಿನಗೆ ಬಾಲ್ಯಶಿಕ್ಷಣವು ದೊರೆತದೆ. ಅಂದಬಳಿಕ ನಾನೇನು ನಿನಗೆ ಬೋಧಿಸಲಿ? ಆದರೂ ನೀನು ಶಿಷ್ಯನಾಗಿ ನನ್ನ ಬಳಿಯಲ್ಲಿ ಬಂದದರಿಂದ ಹೇಳಬೇಕಾಗಿ ಬಂದಿದೆ. ಇಂದು ಸಾಂದೀಪರ ಮನೆಗೆ ಶ್ರೀಕೃಷ್ಣನು ಬಂದಂತಾಗಿದೆಯೆನ್ನಲಿಕ್ಕೆ ನನಗೇನೂ ಸಂದೇಹತೋರುವದಿಲ್ಲ. ಪ್ರಕೃತಕ್ಕೆ ನೀನು ಬ್ರಾಹ್ಮಣವಟು. ಬ್ರಹ್ಮಕುಲದಲ್ಲಿ ಹುಟ್ಟಿದಮೇಲೆ ಆ ಕುಲಕ್ಕೆ ಉಚಿತವಾದ ಕರ್ಮವನ್ನು ಮಾಡಲೇಬೇಕು. ಹಾಗೆ ಮಾಡದಿದ್ದರೆ, ಅರಿಷ್ಟಗಳೂ, ಅನರ್ಥ ಗಳೂ, ಪಾಪಗಳೂ ಸಂಘಟಿಸುವವು. ದೊಡ್ಡಿಸ್ತನವು ಬರಬೇಕಾದರೆ ಬಹು ಕಷ್ಟಪಡಬೇಕಾಗುತ್ತದೆ. "ವರ್ಣಾನಾಂಬ್ರಾಹ್ಮಣೋಗುರುಃ" ಎಂಬ ಗೌರವದ ಪದವಿಯು ಬ್ರಾಹ್ಮಣರಿಗೆ ಬರಬೇಕಾದರೆ, ಅವರು ವರ್ಣಾಶ್ರಮಧರ್ಮದಂತೆ ಏಕನಿಷ್ಠೆಯಿಂದ ಅನುಷ್ಠಾನ ಮಾಡಿದ್ದೇ ಕಾರಣವಿರಬೇಕು. ಅಂಥ ಗೌರವ ವನ್ನು ಬಯಸುವವರು ಆ ಬಗೆಯ ಸದಾಚರಣೆಯಿಂದ ನಡೆಯಬೇಕಾಗುತ್ತದೆ. ನಿನಗೆ ಈಗ ಮಾತ್ರ ವೇದಾಧ್ಯಯನ ಮಾಡಲಿಕ್ಕೆ ಅಧಿಕಾರ ಬಂದಿರುವದು. ಉಪ ನಯನವಾಗುವ ತನಕ ನೀನು ಸ್ವೇಚ್ಛಾಚಾರಿಯಾಗಿ ತಿರುಗಾಡಿದೆ. ಉಪನಯ ನವೆಂಬ ಸಂಸ್ಕಾರಮಾತ್ರದಿಂದ ಪ್ರತಿಯೊಬ್ಬ ಬ್ರಹ್ಮಚಾರಿಗೆ ವೇದಾಧಿಕಾರವು ಬರುತ್ತದೆ. ಅವನು ಆ ಆಶ್ರಮಕ್ಕೆ ಸರಿಯಾದ ಆಚರಣೆಯನ್ನು ಮಾಡಿ, ಬ್ರಹ್ಮಚರ್ಯವನ್ನು ಕಾಪಾಡಿಕೊಳ್ಳಬೇಕಾಗುತ್ತದೆ ಬ್ರಾಹ್ಮಣರ ಆಯುಷ್ಯ ಮರ್ಯಾದೆಯಲ್ಲಿ ಬ್ರಹ್ಮಚರ್ಯಕಾಲವೇ ಅತಿಮಹತ್ವವಾದದ್ದು. ಯಾಕೆಂದರೆ ಈ ಆಶ್ರಮದಲ್ಲಿ ವೇದಾಧ್ಯಯನ, ಶಾಸ್ತ್ರಗ್ರಹಣ, ಆರೋಗ್ಯರಕ್ಷಣ, ಜ್ಞಾನ ಸಂಪಾದನೆ ಮುಂತಾದ ಘನಕಾರ್ಯಗಳು ಕೈಗೂಡುತ್ತವೆ. ಶಿಷ್ಯೋತ್ತಮಾ, ಅಂಥ ಬ್ರಹ್ಮಚರ್ಯವ್ರತವನ್ನೇ ವಿಶೇಷವಾಗಿ ನಿನಗೆ ಹೇಳುತ್ತೇನೆ. ನಾರದಾದಿಗಳಂಥ ಮಹಾತ್ಮರ ಉಪದೇಶದಿಂದ ಇದನ್ನು ಅನುಸರಿಸಿ ನಡೆದು, ಹಲವರುಬ್ರಹ್ಮ ವರ್ಚಸ್ಸನ್ನು ಪಡಕೊಂಡಿರುವರು. ನೀನಾದರೂ ಲಕ್ಷಗೊಟ್ಟು ಕೇಳಿ, ಅವರಂತೆ ವರ್ಚಸ್ವಿಯಾಗು.

ಶುಕಮುನಿಯೇ, ಬ್ರಹ್ಮಚಾರಿಯು ಇಂದ್ರಿಯ ನಿಗ್ರಹಮಾಡಿ ಗುರುಗೃಹದಲ್ಲಿ ಸ್ವಸ್ಥವಾಗಿ ವಾಸಮಾಡಬೇಕು. ಗುರುಕುಲದಲ್ಲಿ ದಾಸಾನುದಾಸನಂತೆ ವಿನಯ

ಶೀಲನಾಗಿ ನಡೆದು, ಗುರುಗಳನ್ನು ಪ್ರಸನ್ನೀಕರಿಸಿಕೊಳ್ಳಬೇಕು. ಅವರಮೇಲೆ ಪೂರ್ಣವಾದ ಪ್ರೇಮವನ್ನಿಟ್ಟು ಹಿತಕರವಾದ ಆಚರಣೆಯನ್ನು ಮಾಡಬೇಕು. ಗುರುಗಳಲ್ಲಿ ಭಯಭಕ್ತಿಗಳಿರಬೇಕು. ಏಕಾಗ್ರಚಿತ್ತದಿಂದ ಗಾಯತ್ರೀಜಪದೊಂದಿಗೆ ತ್ರಿಕಾಲದಲ್ಲಿ ಸಂಧ್ಯೋಪಾಸನೆಯನ್ನು ತಪ್ಪದೆ ಮಾಡಬೇಕು. ಸಂಧ್ಯಾಕಾಲದಲ್ಲಿ ಗುರು, ಅಗ್ನಿ, ಸೂರ್ಯ, ಮತ್ತು ಶ್ರೀವಿಷ್ಣು ಇವರನ್ನು ಉಪಾಸಿಸಬೇಕು. ಗುರುಗಳು ಕರೆದಾಗ ಮಾತ್ರ ಸುವ್ಯವಸ್ಥೆಯಿಂದ ಅವರ ಹತ್ತರಹೋಗಿ, ಅವರಿಂದ ವೇದವನ್ನಾಗಲಿ, ಶಾಸ್ತ್ರವನ್ನಾಗಲಿ ಕಲಿತುಕೊಳ್ಳಬೇಕು. ಶಾಸ್ತ್ರದಲ್ಲಿ ಹೇಳಿದಂತೆ ಕಟಸೂತ್ರ, ಕೌಪೀನ, ಮೃಗಚರ್ಮ, ಯಜ್ಞೋಪವೀತ, ದಂಡ ಮುಂತಾದವುಗಳನ್ನು ಧರಿಸಿಕೊಂಡಿರಬೇಕು. ಮಧ್ಯಾಹ್ನವಾಗುತ್ತಲೆ ಮಧುಕರಿಯನ್ನು ಬೇಡಿಕೊಂಡು ಬಂದು ಅದನ್ನು ಗುರುಗಳಿಗೆ ಅರ್ಪಿಸಬೇಕು. ಅವರು ಅಪ್ಪಣೆ ಕೊಟ್ಟರೆ ಮಾತ್ರ ಭೋಜನ ಮಾಡಬೇಕು. ಸ್ತ್ರೀಯರಕೂಡ, ಇಲ್ಲವೆ ಸ್ತ್ರೀಲಂಪಟಗಳಾದ ಪುರುಷರಕೂಡ ಕಾರಣದ ಮಟ್ಟಿಗೆ (ಅಷ್ಟಕ್ಕಷ್ಟೇ) ಮಾತಾಡಬೇಕು. ಆದರೆ ತೀರ ಗುಮ್ಮನಗುಸಕನಾಗಬಾರದು; ತೀರ ವಾಚಾಲನೂ ಆಗಬಾರದು.

ಶುಕಾ, ಇಂದ್ರಿಯುಗಳು ಬಲಿಷ್ಠವಾದವುಗಳು. ತರಗೆಲೆಗಳನ್ನು ಮುಕ್ಕಿ, ಗಾಳಿಯನ್ನು ನುಂಗಿ, ತಪಸ್ಸುಮಾಡಿದ ಮಹಾತ್ಮರು ಕೂಡ ಹೊತ್ತಿನಲ್ಲಿ ಸ್ತ್ರೀಲಂಪಟಕ್ಕೊಳಗಾಗಿ, ಇಂದ್ರಿಯನಿಗ್ರಹ ಮಾಡಿಕೊಳ್ಳಲಾರದೆ ಭ್ರಷ್ಟರಾಗಿ ಅಧಃಪಾತಕ್ಕೆ ಗುರಿಯಾಗಿದ್ದಾರೆ. ಇದನ್ನರಿತು ವಟುವು ಸ್ತ್ರೀವಿಷಯವಾಗಿ ಏನೂ ಮಾತಾಡಲಾಗದು. ಅವರನ್ನು ಕಂಣೆತ್ತಿಸಹ ನೋಡಕೂಡದು. ಹೆಚ್ಚಿಗೆ ಹೇಳುವದೇನು? ಸಕಲ ಅಲಂಕಾರಗಳೂ, ಚಿತ್ರವಿಚಿತ್ರವಾದ ಉಡಿಗೆ-ತೊಡಿಗೆಗಳೂ, ಭೋಗ್ಯಪದಾರ್ಥಗಳೂ ಬ್ರಹ್ಮಚಾರಿಗಳಿಗೆ ತೀರ ವರ್ಜ್ಯವು. ಜ್ಞಾನಸಂಪಾದನೆಯೇ ಈ ಆಶ್ರಮದಲ್ಲಿ ಸಾಧಿಸತಕ್ಕ ಪುರುಷಾರ್ಥವು. ತಮ್ಮತಮ್ಮ ಶಕ್ತ್ಯನುಸಾರವಾಗಿ ಅಧ್ಯಯನಮಾಡಿ ವಿದ್ಯೆಗಳಿಸಬೇಕು. ಬಳಿಕ ತಮ್ಮಸಾಮರ್ಥ್ಯದಂತೆ ಗುರುದಕ್ಷಿಣೆಯನ್ನು ಕೊಟ್ಟು, ಗುರುಗಳನ್ನು ಪ್ರಸನ್ನೀಕರಿಸಿಕೊಳ್ಳಬೇಕು. ಮುಂದೆ ಗುರುಗಳ ಅಪ್ಪಣೆಯು ದೊರೆತರೆ ಮಾತ್ರ ಗೃಹಸ್ಥಾಶ್ರಮವನ್ನಾಗಲಿ, ವಾನಪ್ರಸ್ಥಾಶ್ರಮವನ್ನಾಗಲಿ ಸ್ವೀಕರಿಸಬಹುದು; ಇಲ್ಲವೆ ನೈಷ್ಠಿಕಬ್ರಹ್ಮಚಾರಿಯಾಗಿ, ಆಜನ್ಮಗುರುಗೃಹದಲ್ಲಿಯೇ ವಾಸಮಾಡಬಹುದು.

ಎಲ್ಲರಲ್ಲಿ ಗುರುವೇ ಶ್ರೇಷ್ಠನು. ನಮಗೆ ಜನ್ಮಕೊಟ್ಟ ತಾಯಿ-ತಂದೆಗಳಿಗಿಂತಲೂ ವಿದ್ಯಾದಾನಮಾಡುವ ಗುರುವು ಹೆಚ್ಚಿನವನೆಂದು ಎಷ್ಟೋ ಶಾಸ್ತ್ರ

ಗಳು ಹೇಳುತ್ತಾವೆ. ಮನುಷ್ಯನಲ್ಲಿ ಮನುಷ್ಯತ್ವವನ್ನುಂಟುಮಾಡುವ ಅವರ ಕಾರ್ಯವು ಸಣ್ಣದಲ್ಲ. ಮನುಮಹರ್ಷಿಗಳಂತು ಆಚಾರ್ಯರು ಪರಮಾತ್ಮನ ಮೂರ್ತಿಯೆಂತಲೇ ಹೇಳಿಬಿಟ್ಟಿರುವರು. ಆದದರಿಂದ ಬೇಕಾದಂಥ ಕಷ್ಟದ ಪ್ರಸಂಗದಲ್ಲಿಯೂ ವಿದ್ಯೆಕೊಟ್ಟ ಗುರುಗಳನ್ನು ಅವಮಾನಿಸಬಾರದು. ಮಾತಾಪಿತೃಗಳು ಜನನಕಾಲದಲ್ಲಿ ಎಷ್ಟು ಕಷ್ಟಪಡುತ್ತಾರೆಂಬ ಕಲ್ಪನೆಯು ಮಕ್ಕಳಿಗಿರುವದಿಲ್ಲ. ಆದರೆ ಶಿಷ್ಯನೇ, ನಾವು ನೂರಾರು ಜನ್ಮವೆತ್ತಿ ಬಂದರೂ ಅವರ ಉಪಕಾರವನ್ನು ತೀರಿಸಲಿಕ್ಕಾಗುವದಿಲ್ಲ. ನೀನು ಅಯೋನಿಸಂಭವನಾದದರಿಂದ ತಾಯಿಯ ಋಣವು ನಿನಗಿಲ್ಲದಿದ್ದರೂ, ತಂದೆಯ ಋಣವು ಇಮ್ಮಡಿಯಾಗಿರುವದು. ಯಾಕೆಂದರೆ, ಬಾಲ್ಯಾವಸ್ಥೆಯಲ್ಲಿ ನಿನ್ನ ಸಂರಕ್ಷಣದ ಕೆಲಸವನ್ನು ತಾಯಿಯ ಬದಲು ನಿನ್ನ ತಂದೆಗಳೇ ಮಾಡಿರುವರು. ಆದದರಿಂದ ಶುಕನೇ, ನೀನು ವ್ಯಾಸರ ಅಪ್ಪಣೆಯನ್ನು ಮೀರಿ ನಡೆಯಬೇಡ. ಗುರು-ತಾಯಿ-ತಂದೆಗಳನ್ನು ಸಂತೋಷಗೊಳಿಸಿದರೆ, ಇಡಿ ಜಗತ್ತನ್ನೇ ಸಂತುಷ್ಟಪಡಿಸಿದಂತಾಗುವದು. ಅವರ ಇಚ್ಛೆಯಂತೆ ನಡೆದರೆ, ಸಕಲ ವೈದಿಕಧರ್ಮವನ್ನು ಆಚರಿಸಿದಂತಾಗುವದು. ಅವರ ಸೇವೆಯನ್ನು ತಪ್ಪದೆ ಮಾಡಿದರೆ, ಸರ್ವದೇವತೆಗಳ ಸೇವೆಯನ್ನು ಮಾಡಿದ ಪುಣ್ಯವು ಘಟಿಸುವದು. ಈ ಮೇರೆಗೆ ಗುರು, ತಾಯಿ, ತಂದೆ ಈ ತ್ರಿವರ್ಗರನ್ನು ಪರಮೇಶ್ವರ ಸ್ವರೂಪವಾಗಿ ಭಾವಿಸಿ, ಏಕನಿಷ್ಠೆಯಿಂದ ಶುಶ್ರೂಷೆಮಾಡುವ ಬ್ರಹ್ಮಚಾರಿಯು, ಚಿರಾಯುಷ್ಯವನ್ನೂ, ಸಕಲತೇಜಸ್ಸನ್ನೂ ಅನಾಯಾಸವಾಗಿ ಹೊಂದುವನು.

ಬೃಹಸ್ಪತಿಮಹರ್ಷಿಗಳು ಈ ಮೇರೆಗೆ ಶುಕಮುನಿಗೆ ಸಂಕ್ಷೇಪವಾಗಿ ಉಪದೇಶಮಾಡಿ, ಅವನನ್ನು ತಮ್ಮ ಸಂಗಡ ತಮ್ಮ ಆಶ್ರಮಕ್ಕೆ ಕರೆದೊಯ್ದರು. ಶುಕನಾದರೂ ಹನ್ನೆರಡು ವರ್ಷಗಳ ಪರ್ಯಂತರವೂ ಬ್ರಹ್ಮಚರ್ಯವ್ರತಸ್ಥನಾಗಿ ವಿದ್ಯಾಭ್ಯಾಸ ಮಾಡಿದನು. ಋಗ್ವೇದಾದಿವೇದ, ಶಿಕ್ಷಾದಿ ಷಡಂಗ, ಮನ್ವಾದಿ ಷಡ್ಧರ್ಮಶಾಸ್ತ್ರ, ಸಾಂಖ್ಯಾದಿ ಷಡ್ದರ್ಶನ, ಬ್ರಹ್ಮಾದ್ಯಷ್ಟಾದಶ ಪುರಾಣ, ಭಾರತಾದ್ಯೈತಿಹ್ಯ ಇವುಗಳನ್ನು ಸಾಂಗೋಪಾಂಗವಾಗಿ ಓದಿದನು. ಇವನ ಅಪೂರ್ವವಾದ ಬುದ್ಧಿಗೆ ಬೃಹಸ್ಪತಿಯು ಸಹ ತಲೆದೂಗಿದನು. ಶುಕಾಚಾರ್ಯರಕೂಡ ಕಲಿಯುತ್ತಿದ್ದ ಸಕಲ ವಿದ್ಯಾರ್ಥಿಗಳು ಹಿಂದೆಯೇ ಉಳಿದರು. ಚತುರ್ದಶವಿದ್ಯೆಗಳೂ ಕಂಠಸ್ಥವಾದಬಳಿಕ ಕೇಳುವದೇನು? ಬ್ರಹ್ಮಚರ್ಯವೂ ವಿದ್ವತ್ತೆಯೂ, ಶುಕರಲ್ಲಿ ಮೂರ್ತಿಮತ್ತಾಗಿ ಹೊಳೆಯಹತ್ತಿದವು. ಸದಾಚಾರದಿಂದ ಅವರ ಮುಖದಲ್ಲಿ ಬ್ರಹ್ಮವರ್ಚಸ್ಸು ಪ್ರಕಾಶಿಸಹತ್ತಿತು. ದೃಢನಿಶ್ಚಯದ ಅವರ ಸ್ವಭಾವವನ್ನು

ನೋಡಿ, ಎಲ್ಲರೂ ಹೆದರಹತ್ತಿದರು. ಅವರ ಪಾಂಡಿತ್ಯಕ್ಕೆ ಬೃಹಸ್ಪತಿಯುಸಹ ಬೆರಗಾದನು. ನಿತ್ಯ ಸೂರ್ಯನಮಸ್ಕಾರ, ಅಗ್ನಿಪ್ರದಕ್ಷಿಣೆ, ಹೋಮಧೂಮದಿಂದ ಕೂಡಿದ ಬೈಲುಹವೆ, ತಂಣೀರಿನ ಸ್ನಾನ ಸ್ವಸ್ಥಮನಸ್ಸು, ಬ್ರಹ್ಮಚರ್ಯಪಾಲನ, ಗುರುಸೇವೆ ಇವೆಲ್ಲವುಗಳಿಂದ ಶುಕರ ಆರೋಗ್ಯವು ಬೆಳೆದು, ಅವರ ಮೈಕಟ್ಟು ದಂಡಗಾಯಿತು. ಅದಕ್ಕೆ ತಕ್ಕಂತೆ ಶರೀರಸಾಮರ್ಥ್ಯವೂ ಹೆಚ್ಚಿತು. ಒಟ್ಟಿಗೆ, ಶುಕರು ಮನೋವಾಕ್ಕಾಯಗಳಿಂದ ಬಲಿಷ್ಠರಾಗಿ, ಗುರುಗಳ ಪ್ರೇಮಕ್ಕೆ ಪಾತ್ರರಾದರೆಂಬದಕ್ಕೇನೂ ಸಂದೇಹವಿಲ್ಲ. ಹೀಗೆ ವಯಸ್ಸಿಗೆ ತಕ್ಕವಿದ್ಯೆಯೂ, ವಿದ್ಯೆಗೆ ತಕ್ಕ ಬುದ್ಧಿಯೂ, ಬುದ್ಧಿಗೆ ತಕ್ಕಕುಶಾಗ್ರತೆಯೂ, ಕುಶಾಗ್ರತೆಗೆ ತಕ್ಕವಿನಯ ಮೊದಲಾದ ಸದ್ಗುಣಗಳೂ ಶುಕರಲ್ಲಿ ಬಂದದರಿಂದ, ಆ ಮುನಿಕುಮಾರರು ಆ ತಪೋವನದಲ್ಲಿ ಎಲ್ಲರಿಗೂ ಪ್ರಿಯಕರರಾದರು.

ಒಂದುದಿನ ಪ್ರಾತಃಕಾಲದಲ್ಲಿ ಸೂರ್ಯನು ಮೂಡಣದಲ್ಲಿ ಅದೇ ಮೂಡಿದ್ದನು. ಆಶ್ರಮದಲ್ಲೆಲ್ಲ ಎಳೆಬಿಸಿಲು ಚೆನ್ನಾಗಿ ಬಿದ್ದಿತ್ತು. ಅದರಿಂದ ಭೂದೇವಿಯು ಪೀತಾಂಬರವನ್ನುಟ್ಟಂತೆ ಒಪ್ಪುತ್ತಿತ್ತು. ಪಕ್ಷಿಗಳು ಆನಂದದಿಂದ ಕಿಲಿಬಿಲಿ ಶಬ್ದಮಾಡುತ್ತಿದ್ದವು. ತಂಪಾದ ಸುಳಿಗಾಳಿಯು ಬೀಸುತ್ತಿತ್ತು. ಪುಷ್ಪವಟಿಕೆಯೊಳಗಿನ ಹೂಗಳು ಅರಳಿ, ಘಮಘಮಿಸುತ್ತಿದ್ದದರಿಂದ ಆಶ್ರಮದಲ್ಲೆಲ್ಲ ಸುವಾಸನೆಯು ಇಡಿಗಿತ್ತು. ಮಕರಂದದಾಶೆಗಾಗಿ, ಮತ್ತ-ಮರಾಳಗಳು ಹಿಂಡುಗಟ್ಟಿ ಆ ಹೂದೋಟದೊಳಗೆಲ್ಲ ಅಂಡಲೆಯುತ್ತಿದ್ದವು. ಆಕಳುಗಳು ಮಲಗಿದ ಸ್ಥಳ ಬಿಟ್ಟೆದ್ದು ಆಶ್ರಮದ ಹೊರಗೆ ಮೇಯಲಿಕ್ಕೆ ಹೊರಟವು. ಅವನ್ನು ನೋಡಿ ಅವುಗಳ ಕರು-ಮರಿಗಳು ಬಾಲ ಮೆತ್ತಿ ಜಿಗಿಯುತ್ತ ಬೆನ್ನುಹತ್ತಿ ನಡೆದಿದ್ದವು. ಕೆಲವಂತು ಹಾದಿಯಲ್ಲಿ ಹೋಗಹೊಗುತ್ತಿರುವಾಗಲೇ ಅಡ್ಡ ಬಂದು ತಮ್ಮ ತಾಯಂದಿರ ಮೊಲೆಯುಂಣುತ್ತಿದ್ದವು. ಮುನಿಗಳೂ, ಮುನಿಕುಮಾರರೂ ಮುನಿಶಿಷ್ಯರೂ ಪ್ರಾತಃಸ್ನಾನಮಾಡಿ ವಲ್ಕಲದ ಬಟ್ಟೆಗಳನ್ನು ಉಟ್ಟು-ಹೊದ್ದು, ತಮ್ಮ ತಮ್ಮ ಆಸನಗಳಲ್ಲಿ ಕುಳಿತು ಪ್ರಾತಃಸಂಧ್ಯೋಪಾಸನೆಯಲ್ಲಿ ತೊಡಗಿದ್ದರು. ಅವರಲ್ಲಿ ಅದೇ ಸಂಧ್ಯಾವಂದನವನ್ನು ಆರಂಭಿಸಿದಕೆಲವರು ಅಂತಃಶುದ್ಧಿಗಾಗಿ ಮೂಗುಹಿಡಿದು, ಪ್ರಾಣಾಯಾಮಮಾಡುತ್ತಿದ್ದರು. ಕೆಲವರು ಅಘಮರ್ಷಣವನ್ನು ಮುಗಿಸಿ, ಸೂರ್ಯಾರ್ಘ್ಯಗಳನ್ನು ಕೊಡುತ್ತಿದ್ದರು. ಮತ್ತೆ ಕೆಲವರು ಉತ್ತರೀಯದಿಂದ ಮುಸುಕುಹಾಕಿಕೊಂಡು, ಪೂರ್ವಾಭಿಮುಖವಾಗಿ ಗಾಯತ್ರೀಮಂತ್ರ ಜಪಿಸುತ್ತಿದ್ದರು. ಬೇರೆ ಹಲವರು ದಿಕ್ಪಾಲಕರನ್ನು ಪೂಜಿಸುತ್ತಿದ್ದರು. ಇನ್ನು ಹಲವರು ಸಂಧ್ಯೋಪಾಸನೆಯನ್ನು ಮುಗಿಸಿಕೊಂಡು, ಸೂರ್ಯನಮಸ್ಕಾರದಲ್ಲಿ ತೊಡಗಿದ್ದರು, ಎಷ್ಟೋ ವಟುಗಳು ಅಗ್ನಿಪೂಜೆಯಲ್ಲಿ ನಿರತರಾಗಿದ್ದರು.

ಕೆಲವರು ಅಗ್ನಿಯಲ್ಲಿ ಸಮಿಧಗಳನ್ನು ಹಾಕುತ್ತಿದ್ದರು. ಹಲವು ಬ್ರಹ್ಮಚಾರಿಗಳು ಧ್ಯಾನದಿಂದ ಅಗ್ನಿಗೆ ಆಹುತಿ ಕೊಡುತ್ತಿದ್ದರು. ಹಲವರು ಪಿತೃತರ್ಪಣವನ್ನು ಮಾಡಿ ಅದೇದೇವರಪೂಜೆಗೆ ಕೂತಿದ್ದರು. ಋಷಿಪತ್ನಿಯರುಆಶ್ರಮದ ಅಂಗಳವನ್ನು ಗೋಮಯದಿಂದ ಸಾರಿಸಿ ಅದರಮೇಲೆ ಅಂದವಾದ ರಂಗವಲ್ಲಿಯನ್ನು ತೆಗೆಯುತ್ತಿದ್ದರು. ಮುನಿಕುಮಾರಿಯರು ಮುನಿಗಳು ಮಿಂದುಬಿಟ್ಟ ವಸ್ತ್ರಗಳನ್ನು ಒಗೆದು ಒಣಗಿಸಿ ಮಡಿಮಾಡುತ್ತಿದ್ದರು. ಹೀಗೆ ಆ ತಪೋವನದಲ್ಲಿ ಎಲ್ಲರೂ ಒಂದಿಲ್ಲೊಂದು ಕೆಲಸದಲ್ಲಿ ತೊಡಗಿದ್ದರು. ಈ ಸಮಯದಲ್ಲಿ ಆಚಾರ್ಯರ ಪ್ರಿಯಶಿಷ್ಯೋತ್ತಮರಾದ ಶುಕರು ಎಲ್ಲರಿಗಿಂತ ಮೊದಲೇ ತಮ್ಮ ಪ್ರಾತಃಕರ್ಮಗಳನ್ನು ನೆರವೇರಿಸಿಕೊಂಡು, ಅಧ್ಯಯನಶಾಲೆಗೆ ಬಂದರು. ಅವರು ಗುರುಪೀಠವನ್ನು ನಿರ್ಮಲಮಾಡಿ, ಮೊದಲು ದರ್ಭಾಸನವನ್ನೂ, ಅದರಮೇಲೆ ವ್ಯಾಘ್ರಾಸನವನ್ನೂ ಮಂಡಿಸಿ, ಬೆನ್ನುಮಣೆಯನ್ನಿಟ್ಟರು. ಗುರುಗಳ ಸಮ್ಮುಖದಲ್ಲಿ ವ್ಯಾಸಪೀಠವನ್ನು ಇಟ್ಟು ಅದನ್ನು ಪುಸ್ತಕಗಳಿಂದ ಶೋಭಿಸಿದರು. ಕೈಗೆ ಸಿಲುಕುವಂತೆ ಅಲ್ಲಿಯೇ ಸನಿಯದಲ್ಲಿ ಅನೇಕ ಗ್ರಂಥಗಳನ್ನು ಸಾಲ್ಗೊಳಿಸಿ ಇಟ್ಟರು. ಇಷ್ಟರೊಳಗೆ ತೇಜೋರಾಶಿಗಳಾದ ಬೃಹಸ್ಪತ್ಯಾಚಾರ್ಯರು ಶಿಷ್ಯನಿಂದ ನಿರ್ಮಿತವಾದ ತಮ್ಮ ಗದ್ದುಗೆಯಲ್ಲಿ ಬಂದುಕುಳಿತರು. ಗುರುವರ್ಯರು ಬಂದೊಡನೆಯೇ ಎಲ್ಲಶಿಷ್ಯರು ಎದ್ದುನಿಂತು ಆನಂದದಿಂದ ಗುರುಸ್ತೋತ್ರಮಾಡಿ, ಆದರದಿಂದ ನಮಿಸಿ, ಆಜ್ಞೆಯನ್ನು ಪಡೆದು, ತಾವೂ ತಮ್ಮ ತಮ್ಮ ಆಸನಗಳಲ್ಲಿ ಕುಳಿತುಕೊಂಡರು. ಬಳಿಕ ಪಾಠಪ್ರವಚನಗಳ ಕೆಲಸನಡೆಯಿತು. ಶಾಸ್ತ್ರಗಳನ್ನು ಓದುವವರು ಶಾಸ್ತ್ರಗಳ ಗೂಢತತ್ವಗಳನ್ನು ಕೇಳುತ್ತ ಕುಳಿತರು; ವೇದವನ್ನು ಅನ್ನುವವರು ವೇದಪಾಠದಲ್ಲಿ ತೊಡಗಿದರು; ಪೌರಾಣಿಕರು ಪುರಾಣ ಚಿಂತನೆಯಲ್ಲಿ ತೊಡಗಿದರು. ಹೀಗೆ ಎಲ್ಲ ಶಿಷ್ಯರೂ ತಾವು ಕಲಿತ ಪಾಠಗಳನ್ನು ಗುರುಸನ್ನಿಧಿಯಲ್ಲಿ ನಿವೇದಿಸಿ, ಹೊಸ ಪಾಠಗಳನ್ನು ಹೇಳಿಸಿಕೊಂಡು, ಅವನ್ನು ಗಟ್ಟಿಮಾಡುತ್ತ ಕುಳಿತರು.

ಇಷ್ಟೆಲ್ಲ ಆಗುವ ತನಕ ನಮ್ಮ ಚರಿತ್ರನಾಯಕರಾದ ಶುಕರು ತಮ್ಮ ಸ್ಥಳದಲ್ಲಿ ಸುಮ್ಮನೆ ಕುಳಿತಿದ್ದರು. ಕೆಲಹೊತ್ತಿನ ಮೇಲೆ ಗುರುಸಮ್ಮುಖದಲ್ಲಿ ಯಾರೂ ಇಲ್ಲದ್ದನ್ನು ನೋಡಿ, ತಮ್ಮ ಜಗಲಿಯಿಂದೆದ್ದು, ಗುರುಗಳ ಕಡೆಗೆ ಮೆಲ್ಲಗೆ ಬಂದರು. ಅವರ ಬರುವಿಕೆಯು, ಕಾಯಿಕ-ವಾಚಿಕ-ಮಾನಸಿಕ ವಿನಯವೆಲ್ಲಾ ಒಟ್ಟುಗೂಡಿ, ರಾಶಿಯಾದ ಒಂದು ಮೂರ್ತಿಯೇ ಗುರುಸಾಮೀಪ್ಯವನ್ನು ಸೇರುತ್ತದೋ ಏನೋ, ಎಂಬಂತೆ ಎಲ್ಲರಿಗೂ ತೋರಿತು. ಗುರುಸನ್ನಿಧಿಗೆ ಹೋಗಿ, ಗುರುಚರಣಾರವಿಂದದಲ್ಲಿ ಮಸ್ತಕವನ್ನಿಟ್ಟು, ವಿನಯವಿನಮ್ರ

ರಾಗಿ, ಅಸ್ಖಲಿತವಾದರೂ ನವ್ರತವ ವಾದ ವಾಣಿಯಿಂದ— “ ಸದ್ಗುರುಗಳೇ, ತಾವು ಇಲ್ಲಿಯುವರೆಗೆ ನನಗೆ ಸದ್ಧರ್ಮಸರ್ವಸ್ವವನ್ನೆಲ್ಲ ಉಪದೇಶಿಸಿದಿರಿ; ಈಶ್ವರನ ಅಸ್ತಿತ್ವವನ್ನು ಸಾಪಿಸುವಂಥ ವೇದಶಾಸ್ತ್ರಾದಿಗಳಲ್ಲಿ ದೃಢವಾದ ಶ್ರದ್ಧೆಯನ್ನಿಡಲು ಕಲಿಸಿದಿರಿ; ಪ್ರಾಣಾಯಾಮಾದಿ ಸಾಧನಗಳಿಂದ ಇಂದ್ರಿಯಗಳನ್ನು ನಿಗ್ರಹಿಸುವ ಹಾದಿಯನ್ನು ತೋರಿಸಿದಿರಿ; ಸಾಧುಸಮಾಗಮದ ಮಹತ್ವವನ್ನು ಹೇಳಿದಿರಿ; ಬಡವರಲ್ಲಿ ದಯವನ್ನೂ, ಸರಿಕರಲ್ಲಿ ಗೆಳೆತನವನ್ನೂ, ಉತ್ತಮರಲ್ಲಿ ವಿನಯವನ್ನೂ ಇಡಬೇಕೆಂದು ಬೋಧಿಸಿದಿರಿ; ಪರಪೀಡೆಯ ಸಮಾನ ಪಾಪವಿಲ್ಲೆಂದೂ, ಪರೋಪಕಾರದ ಸಮಾನ ಪುಣ್ಯವಿಲ್ಲೆಂದೂ ತಿಳಿಸಿದಿರಿ; ಸುಖದುಃಖಗಳಲ್ಲಿಯೂ, ಅನುಕೂಲ-ಪ್ರತಿಕೂಲ ಪರಿಸ್ಥಿತಿಗಳಲ್ಲಿಯೂ, ಮನಃಸಮತ್ವವನ್ನು ಕಾಯುವ ಬಗೆಯನ್ನು ಸೂಚಿಸಿದಿರಿ; ಗುರುಹಿರಿಯರಲ್ಲಿ ಜೀವಹೋದರೂ ತಿರಸ್ಕಾರಮಾಡಕೂಡದೆಂಬದನ್ನು ತಿಳಿಸಿದಿರಿ; ನಮಗೆ ಕ್ಷುಲ್ಲಕವೆಂದು ಕಂಡುಬರುವ ಸಕಲ ಪದಾರ್ಥಗಳಿಂದ ಸಹ ಏನಾದರೊಂದು ಬೋಧವನ್ನು ಕಲಿತುಕೊಳ್ಳಬೇಕೆಂದು ಸಹ ಹೇಳಿದಿರಿ; ಮನೆ-ಮಾರು, ಮಡದಿ-ಮಕ್ಕಳು ಇವರಲ್ಲಿ ಅತ್ಯಾಸಕ್ತಿಯನ್ನಿಡದೆ ಅನಂತ ಲೀಲಾಕಾರಣನಾದ ಪರಮಾತ್ಮನಲ್ಲಿ ಮನಸ್ಸಿಡಬೇಕೆಂದು ಉಪದೇಶಿಸಿದಿರಿ; ಹೀಗೆ ತಮ್ಮಿಂದ ನಾನು ಒಂದಲ್ಲ, ಎರಡಲ್ಲ ಹಲವು ಸಂಗತಿಗಳನ್ನು ಕಲಿತುಕೊಂಡೆನು. ಹಲವು ನೀತಿ-ನಡತೆಗಳನ್ನು ಅಂತೆನು; ಹಲವು ಧರ್ಮಸಾರಸ್ಯವನ್ನು ತಿಳಿದೆನು; ಇಲ್ಲವೆ ಸಕಲ ಜ್ಞಾನಸುಧೆಯನ್ನೇ ತಮ್ಮಿಂದ ನಾನು ಪ್ರಾಶನ ಮಾಡಿದೆನು. ಅದರಿಂದ ತಮ್ಮಿಂದಾದ ಉಪಕಾರವನ್ನು ಅಷ್ಟಿಷ್ಟೆಂದು ಹೇಳಲಾಸಲ್ಲ. ಅದನ್ನು ಹ್ಯಾಗೆ ತೀರಿಸಬೇಕೋ ನನಗೆ ತಿಳಿಯದಾಗಿದೆ. ಗುರುದಕ್ಷಿಣೆಯನ್ನು ಸಮರ್ಪಿಸುವದು, ವಿದ್ಯಾರ್ಥಿಯ ಪರಂಪರಾಗತ ಪದ್ಧತಿಯು. ನನ್ನಿಂದೇನಾದರೂ ಆಗತಕ್ಕದ್ದಿದ್ದರೆ, ನನ್ನ ಯೋಗ್ಯತೆಗೆ ಸರಿಯಾದ ಕೆಲಸಗಳನ್ನು ಹೇಳಿ ಪರೀಕ್ಷಿಸಬೇಕು, ” ಎಂದಕೂಡಲೆ, ಗುರುಗಳು ಹಿಂಹಿರಿ ಹಿಗ್ಗಿ —ತಮ್ಮಾ ಶುಕಾ, ನಿನ್ನಂಥ ಗ್ರಹಣಶಕ್ತಿಯುಳ್ಳ, ಹಾಗು ನಿನ್ನಂಥ ಕುಶಾಗ್ರಬುದ್ಧಿಯುಳ್ಳ ಗುಣಸಂಪನ್ನರಾದ ಶಿಷ್ಯರು ನಮಗೆ ಸಿಕ್ಕುವದು ಅಪೂರ್ವವೇ ಸರಿ! ನೀನು ಬರಿಯ ವಿದ್ಯೆಯಿಂದ ನನ್ನನ್ನು ಪ್ರೀತಿಗೊಳಿಸಿದೆಯೆಂತಲ್ಲ; ನಯ-ವಿನಯದಿಂದಲೂ, ಸದಾಚಂಣೆಯಿಂದಲೂ ನನ್ನನ್ನು ಸಂತೋಷಗೊಳಿಸಿದೆ. ಈ ಜಗತ್ತಿನಲ್ಲಿ ಶಿಷ್ಯವಿತ್ತಾಪಹಾರಕರಾದ ಗುರುಗಳು ಹಲವರುಂಟು. ಶಿಷ್ಯರ ಚಿತ್ತಾಪಹಾರಕರಾದ ಗುರುಗಳು ದುರ್ಮಿಳರಾಗಿದ್ದಾರೆ. ಪ್ರಿಯಶಿಷ್ಯನೇ, ನನ್ನಮಾತು ಬೇರೆ. ನನಗಾವಐಶ್ವರ್ಯದ ಕೊರತೆಯೂ ಇಲ್ಲ. ಸ್ವರ್ಗಲೋಕದ ಇಂದ್ರಾದಿದೇವತೆಗಳು

ನನ್ನ ದಾಸಾನುದಾಸ.! ಅಂದಬಳಿಕ ನಾ ನಿನ್ನಿಂದ ಗುರುದಕ್ಷಿಣೆಯನ್ನೇನು ಬಯು ಸಲಿ? ಪ್ರಿಯಶಿಷ್ಯಾ, ಏಕೋಭಾವದಿಂದ ಸೇವೆಮಾಡಿ, ಮನಃಸರ್ವಸ್ವವನ್ನು ನನಗೆ ಸಮರ್ಪಿಸಿ, ಇಲ್ಲಿಯವರೆಗೆ ನೀನು ನನ್ನ ಆಶ್ರಮದಲ್ಲಿ ವಾಸ್ತವ್ಯಮಾಡಿದ್ದೇಸಾಕು. ಅದೇ ನನಗೆ ಗುರುದಕ್ಷಿಣೆಗಿಂತ ಅತ್ಯಧಿಕವಾಗಿದೆ. ಗುರುಗಳ ಮನಸ್ಸನ್ನು ತೃಪ್ತಿಬಡಿಸುವದಕ್ಕಿಂತ ಹೆಚ್ಚಿನ ಗುರುದಕ್ಷಿಣೆಯು ಮತ್ತ್ಯಾವದು? "ಶಿಷ್ಯಾದಿಚ್ಛೇತ್ಪರಾಜಯಂ" (ಶಿಷ್ಯನಿಂದ ಸೋಲು ಬಯಸತಕ್ಕದ್ದು) ಎಂಬಂತೆ ಇನ್ನು ನಿನಗೆ ಹೇಳತಕ್ಕಂಥ ವಿದ್ಯೆಗಳೇನೂ ನನ್ನಲ್ಲಿ ಉಳಿಯಲಿಲ್ಲ. ಕಲಿಸತಕ್ಕದ್ದೇನೂ ಕಾಣುವದಿಲ್ಲ. ನನ್ನಿಂದ ಕಲಿಯಲ್ಪಟ್ಟ ಸಕಲವಿದ್ಯೆಗಳನ್ನು, ನನಗೆ ಪರಮಪೂಜ್ಯರೂ, ನಿನ್ನ ತಾಯಿ-ತಂದೆಗಳೂ ಎನಿಸಿದ ವ್ಯಾಸಮಹರ್ಷಿಗಳ ಬಳಿಯಲ್ಲಿ ನಿವೇದಿಸು. ಅವರು ಆನಂದಪಟ್ಟರೆ ಸಾಕು; ನಾನು ಕಲಿಸಿದ್ದು ಸಾರ್ಥಕವಾದಂತಾಯಿತು. ನಿನಗೆ ಇನ್ನೇನೂ ವಿಶೇಷ ಹೇಳುವದಿಲ್ಲ ಆದರೆ ಕೊನೆಗೆ ನಾನು ಇಷ್ಟೇ ಹೇಳುತ್ತೇನೆ. ಈಗ ನೀನು ತಾರುಣ್ಯಾವಸ್ಥೆಗೆ ಬಂದಿರುವೆ; ಸಮಾವರ್ತನೆಯ ವಿಧಿಯನ್ನು ನೆರವೇರಿಸಿಕೊಂಡು, ಗೃಹಸ್ಥಾಶ್ರಮಿಯಾಗಿ, ಸಾಧುಸಜ್ಜನರನ್ನು ಸಂತೋಷಗೊಳಿಸುತ್ತ ಧನ್ಯನೆನಿಸಿಕೋ. ತೈತ್ತರೀಯೋಪನಿಷತ್ತಿನ ಶಿಕ್ಷಾಧ್ಯಾಯವನ್ನು ಕನ್ನಡಿಯಂತೆ ಹಗಲಿರಳು ಹೃದಯದ ಮುಂದಿಟ್ಟುಕೊಂಡು ನಡೆ, ಎಂದು ಹೇಳಿದರು. ಆ ಅಧ್ಯಾಯವು ಬಹಳ ಮಹತ್ವಉಳ್ಳದ್ದಿರುವದರಿಂದ ಅದರಸಾರವನ್ನು ವಾಚಕರ ಸಲುವಾಗಿ ಇಲ್ಲಿ ಕೊಟ್ಟಿರುವೆವು.

ಗುರುಕುಲವಾಸದಲ್ಲಿ ಅಧ್ಯಯನವನ್ನು ಮುಗಿಸಿಕೊಂಡು, ಗುರುದಕ್ಷಿಣೆಯನ್ನು ಸಮರ್ಪಿಸಿ, ವಿದ್ಯಾರ್ಥಿಗಳು ತಮ್ಮ ಮನೆಗೆ ಹೋಗುವಾಗ ಅವರನ್ನು ಕುರಿತು ಗುರುಗಳು—"ಮಕ್ಕಳೇ ನೀವು ಎಂದೂ ಸುಳ್ಳು ಹೇಳಬೇಡಿರಿ; ನೀವು ಯಾವಾಗಲೂ ನಿಮ್ಮ ಕರ್ತವ್ಯವನ್ನು ಮಾಡುತ್ತಿರಿ ಅಧ್ಯಯನದಲ್ಲಿ ಅಲಕ್ಷಮಾಡಬೇಡಿರಿ ಸತ್ಯದಿಂದ ದೂರಾಗಬೇಡಿರಿ. ಕರ್ತವ್ಯದಿಂದ ಪರಾಙ್ಮುಖರಾಗಬೇಡಿರಿ. ಹಿತವಾದವುಗಳನ್ನು ಮಾಡಲಿಕ್ಕೆ ಹಿಂದುಮುಂದು ನೋಡಬೇಡಿರಿ. ಮಂಗಲಕರವಾದವುಗಳನ್ನು ಮಾಡಲಿಕ್ಕೆ ಮುಂದು ಬೀಳದೆ ಇರಬೇಡಿರಿ ಕಲಿತವುಗಳನ್ನು ಜಾಗ್ರತವಾಗಿ ಇಡಲಿಕ್ಕೂ, ಅವನ್ನು ಎರಡನೆಯವರಿಗೆ ಕಲಿಸಲಿಕ್ಕೂ ಎಷ್ಟೂ ಆಲಸ್ಯಮಾಡಬೇಡಿರಿ. ದೇವತೆಗಳ ಹಾಗು ಪಿತೃಗಳ ಪ್ರೀತ್ಯರ್ಥವಾಗಿ ಮಾಡತಕ್ಕ ಕೆಲಸಗಳಲ್ಲಿ ಸೋಮಾರಿತನವನ್ನು ಮಾಡಬೇಡಿರಿ. ತಾಯಿಯನ್ನು ದೇವರೆಂದು ತಿಳಿಯಿರಿ. ತಂದೆಯನ್ನು ದೇವರೆಂದು ಎಣಿಸಿರಿ ಗುರುಗಳನ್ನು ದೇವರೆಂದು ಗ್ರಹಿಸಿರಿ. ಅತಿಥಿಗಳನ್ನು ದೇವರೆಂದು ಭಾವಿಸಿರಿ. ಸರ್ವಥಾ ನಿರ್ದೋಷ

ವಾದವುಗಳನ್ನೇ ಮಾಡಿರಿ. ಉಳಿದವುಗಳ ಗೋಜಿಗೆ ಹೋಗಬೇಡಿರಿ. ನಾವು ಮಾಡುತ್ತಿರುವ ಸತ್ಕೃತ್ಯಗಳನ್ನು ನೀವು ಮಾಡಿರಿ; ಮಿಕ್ಕವುಗಳನ್ನು ಮಾಡಬೇಡಿರಿ. ನಿಮಗಿಂತಲೂ ಶ್ರೇಷ್ಠರಾದ ಜನರ ಮಾನಕಾಯಿರಿ. ಅವರನ್ನು ಸಂತುಷ್ಟಗೊಳಿಸಿರಿ. ಯಾರಿಗಾದರೂ ಕೊಡಬೇಕಾದದ್ದನ್ನು ಶ್ರದ್ಧೆಯಿಂದ ಕೊಡಿರಿ. ಶ್ರದ್ಧೆಯಿಲ್ಲದೆ ಎಂದೂ ಕೊಡಬೇಡಿರಿ; ಆನಂದದಿಂದ ಕೊಡಿರಿ. ದೀನತನದಿಂದ ಕೊಡಿರಿ. ಹೆದರಿ ಹೆದರಿ ಕೊಡಿರಿ. ಪ್ರೇಮಪುರಸ್ಸರ ಕೊಡಿರಿ. ಒಂದೊಂದು ಪ್ರಸಂಗದಲ್ಲಿ ಹೇಗೆನಡೆಯಬೇಕು? ಏನು ಮಾಡಬೇಕು? ಎಂಬದು ನಿಮಗೆತಿಳಿಯದಿದ್ದರೆ, ನಾಲ್ವರು ವಿಚಾರಬಲ್ಲವರು ನಡೆಯುತ್ತಿದ್ದಂತೆ ನಡೆಯಿರಿ. ಆ ವಿಚಾರಜ್ಞರು ನೀವು ನೇಮಿಸಿಕೊಂಡ ಶಿಕ್ಷಕರಿರಲಿ, ಅಥವಾ ಹೆರವರೇ ಇರಲಿ. ಅವರ ಬುದ್ಧಿಯು ನಿಷ್ಠುರವಿಲ್ಲದ್ದೂ, ಧರ್ಮಶೀಲವಿದ್ದದ್ದೂ ಇದ್ದರೆ ಸಾಕು. ಇದೇ ಮೇರೆಗೆ ಪ್ರಸಂಗ ವಿಶೇಷದಲ್ಲಿ ಒಂದು ಸಂಗತಿಯು ಯೋಗ್ಯವೋ? ಅಯೋಗ್ಯವೋ? ಇದುತಿಳಿಯದಿದ್ದರೆ ನಾಲ್ವರು ಬುದ್ಧಿವಂತರು ಹೇಳಿದಂತೆ ಕೇಳಿದರಾಯಿತು. ಅವರು ನಿಮ್ಮ ಗುರುಗಳಿರಲಿ, ಎರಡನೆಯವರಿರಲಿ; ಅವರ ಬುದ್ಧಿಯು ನಿಷ್ಠುರವಿಲ್ಲದ್ದೂ, ಧರ್ಮಶೀಲವಿದ್ದದ್ದೂ ಇದ್ದರೆ ತೀರಿತು. ಇದೇ ನಮ್ಮ ಆಜ್ಞೆಯು. ಇದೇ ನಮ್ಮ ಉಪದೇಶವು. ಇದೇ ನಮ್ಮ ವೇದಾಜ್ಞೆಯು. ಇದೇ ನಾವು ಗೊತ್ತುಮಾಡಿಕೊಟ್ಟ ಕಟ್ಟಳೆಯು. ಇದರಂತೆ ನಡೆಯಿರಿ! ಇದರಂತೆಯೇ ನಡೆಯಿರಿ!!"

ವಾಚಕರೇ, ಮೇಲಿನ ಉಪದೇಶವು ಎಷ್ಟು ಬೆಲೆಯುಳ್ಳದ್ದದೆ? ಇದನು ತಪ್ಪದೆ ನಿಮ್ಮ ಮಕ್ಕಳಿಗೆ ತಿಳಿಸಿಹೇಳಿ, ಅವರು ಅಡ್ಡಹಾದಿಹಿಡಿಯದಂತೆ ಮಾಡಿರಿ; ನಿಮ್ಮ ಮಕ್ಕಳ ಸಲುವಾಗಿಯೇ ಈ ಶಿಕ್ಷಾಧ್ಯಾಯವನ್ನು ಇದ್ದಕ್ಕಿದ್ದಂತೆ ಯಥಾಮತಿಯಿಂದ ಕನ್ನಡಿಸಿ, ನಿಮ್ಮೆದುರಿಗೆ ಇಟ್ಟಿರುತ್ತೇನೆ. ಈ ಉಪದೇಶವು ಇಂದಿನದಲ್ಲ, ನಿನ್ನಿನದಲ್ಲ; ಸಾವಿರಾರು ವರ್ಷಗಳ ಹಿಂದಿನದು! ಅಂದಬಳಿಕ ಇದರ ಮಹತ್ವವನ್ನು ನೀವೇ ತರ್ಕಿಸಿರಿ! ನೀವೇ ನಿಮ್ಮ ಮಕ್ಕಳ ಮನಸ್ಸಿನಲ್ಲಿ ಇದನ್ನು ನಡಿಸಿಬಿಡಿರಿ.

---

## ೪ ಧನ್ಯೋಗೃಹಸ್ಥಾಶ್ರಮಃ

ಒಂದುದಿವಸ ವ್ಯಾಸರು ಶುಕರೊಡನೆ ಸಾಯಂಸಂಧ್ಯೋಪಾಸನೆಗಾಗಿ ಆಶ್ರಮದ ಬಲಭಾಗದಲ್ಲಿರುವ ಸರೋವರಕ್ಕೆ ಹೋದರು. ವಾಚಕರೇ ಆ ಸರೋವರದ ಸೌಂದರ್ಯವನ್ನು ಹೇಳಲಾಸಲ್ಲ. ಅದು ಅಷ್ಟೊಂದು ವಿಸ್ತಾರವಾಗಿರ

ದಿದ್ದರೂ ಬಲು ಅಚ್ಚುಕಟ್ಟಾಗಿತ್ತು. ಆಶ್ರಮವಾಸಿಗಳಾದ ಮುನಿಶಿಷ್ಯರು ಗುರುಗಳ ಸಂಧ್ಯೋಪಾಸನೆಗಾಗಿ ಸ್ವಂತಶ್ರಮಬಟ್ಟು ಅದನ್ನು ಕಡಿದಿದ್ದರು. ಅದರ ನಾಲ್ಕೂ ನಿಟ್ಟಗೆ ಹಾಸುಗಲ್ಲುಗಳಿಂದ ಸೋಪಾನಗಳನ್ನು ಕಟ್ಟಿದ್ದರು. ಒಂದು ಸೆಲೆಯು ನೀರು ಯಾವಾಗಲೂ ಅದರಲ್ಲಿ ಹರಿದು ಬರುವಂತೆ ಮಾಡಿದ್ದರು. ಹಾಗು ಅದರಲ್ಲಿಯ ನೀರು ಮಲಿನವಾಗಬಾರದೆಂದು ಆ ಸರೋವರಕ್ಕೆ ಒಂದು ಕಾಲಿವೆಯನ್ನು ತೋಡಿ, ಸರ್ವದಾ ಆ ನೀರು ಹರಿದುಹೋಗಿ ತಪೋವನದ ಹೂಗಿಡಬಳ್ಳಿಗಳಿಗೆ ನಿಲುಕುವಂತೆ ವ್ಯವಸ್ಥೆಮಾಡಿದ್ದರು. ದಂಡೆಯ ಮೇಲೆ ಬಗೆಬಗೆಯ ಹೂಗಿಡಬಳ್ಳಿಗಳನ್ನು ಹಚ್ಚಿದ್ದರು. ಒಂದು ನಿಟ್ಟಗೆ ನೆಲ್ಲಿ, ನೀರಲ, ರಸಾಲ, ಕದಳೀವೃಕ್ಷದಂಥ ಫಲತರುಗಳಿದ್ದರೆ, ಇನ್ನೊಂದು ಕಡೆಗೆ ಚಂಪಕ, ಬಕುಲ, ಪಾಟಲ, ಪಾರಿಜಾತದಂಥ ಕುಸುಮ ತರುಗಳಿದ್ದವು. ಇತ್ತ ಮಲ್ಲಿಗೆಯಂಥ ಲತಾಕುಸುಮಗಳ ಮಂಟಪಗಳಿದ್ದರೆ, ಅತ್ತ ಗಡ್ಡೆಗೆಣಸುಗಳಂಥ ಕಂದ-ಮೂಲಗಳ ತೋಟಗಳಿದ್ದವು. ಇನ್ನು ಸರೋವರದೊಳಗೆ ನೋಡಿದರೆ ಹೊಂದಾವರೆ, ಕೆಂದಾವರೆ, ಬೆಳ್ದಾವರೆ-ಇಂದೀವರಗಳು ವಿಕಸಿತವಾಗಿ ಒಪ್ಪುತ್ತಿದ್ದವು. ಹಂಣು-ಹಂಪಲಗಳ ಹಂಬಲದಿಂದ ಬಂದಹಕ್ಕಿಗಳ ಕಿಲಿಬಿಲಿಧ್ವನಿಯೂ, ಹೂವಿನ ಮಕರಂದ ಪಾನಕ್ಕಾಗಿ ಸುಳಿದಾಡುತ್ತಿರುವ ತುಂಬಿಗಳ ಝೇಂಕಾರಶಬ್ದವೂ, ಮರದಿಂದ ಮರಕ್ಕೆ ನೆಗೆದು ಸರೋವರದಮಡುವಿನೊಳಗೆ ಧುಮುಕುವ ಮಂಗಗಳ ಧಡಧಡಸಪ್ಪಳವೂ, ಪುಷ್ಪವೃಕ್ಷಗಳ ಬುಡದಲ್ಲಿ ಚಿಂತನೆಮಾಡುತ್ತಿರುವ ಋಷಿಪುತ್ರರ ವೇದಘೋಷವೂ, ಗಾಳಿಯ ಹೊಡತಕ್ಕೇಳುವ ಸರೋವರದ ತೆರೆಗಳ ಸಪ್ಪಳವೂ, ಆ ಆಶ್ರಮದ ಕೀರ್ತಿಯನ್ನು ಪಸರಿಸುವದಕ್ಕೆ ಡಂಗುರವನ್ನು ಸಾರುವಂತೆ ಕಾಣುತ್ತಿದ್ದವು. ದಣಿದು ಬಂದ ದಾರಿಕಾರರು ಆ ಸರೋವರವನ್ನು ನೋಡಿದ ಕೂಡಲೆ ಮನಸ್ಸು ಹರಿದು ಪಥಶ್ರಮವನ್ನು ಮರೆದು, ಅಲ್ಲಿ ಕ್ಷಣವಾದರೂ ಕೂಡ್ರದೆ ಮುಂದಕ್ಕೆ ಹೋಗುತ್ತಿದ್ದಿಲ್ಲ. ಈ ತಂಗೊಳವನ್ನು ನೋಡಿದ ಕಂಣುಗಳು ನಿಜವಾಗಿ ಧನ್ಯವಾದವುಗಳು. ಅದರೊಳಗಿನ ನೀರಿನ ಸ್ವಾದವನ್ನು ಎಷ್ಟೆಂದು ಹೇಳಬೇಕು! ಎಷ್ಟು ಕುಡಿದರೂ ತೃಪ್ತಿಯಿಲ್ಲ. ದಿನಾಲು ವ್ಯಾಸರು ತಮ್ಮ ಶಿಷ್ಯರೊಂದಿಗೆ ಈ ತಿಳಿಗೊಳಕ್ಕೆ ಬಂದು, ತ್ರಿಕಾಲದಲ್ಲಿಯೂ ಸಂಧ್ಯಾವಂದನೆಯನ್ನು ನೆರವೇರಿಸುತ್ತಿದ್ದರು. ಅಂದಬಳಿಕ ಆ ಪುಷ್ಕರಣಿಯ ಪವಿತ್ರತೆಯನ್ನೇನು ವರ್ಣಿಸೋಣ? ಇಂಥ ಅಹ್ಲಾದದಾಯಕವಾದ ರಮಣೀಯ ಸ್ಥಳವೇ ಪರಮೇಶ್ವರಧ್ಯಾನಕ್ಕೆ ತಕ್ಕದ್ದು! ಇರಲಿ.

ಈಹೊತ್ತು ಶಿಷ್ಯರೆಲ್ಲ ಶೀಘ್ರವಾಗಿ ತಮ್ಮ ಸಂಧ್ಯಾವಂದನೆಯನ್ನು ಮುಗಿಸಿಕೊಂಡು ಪಾಠಚಿಂತನೆಗಾಗಿ ಆಶ್ರಮಕ್ಕೆ ಹೊರಟುಹೋದರು. ಆ ನಮ್ಮ ವ್ಯಾಸ-

ಶುಕರು(ತಂದೆ-ಮಕ್ಕಳು) ಮಾತ್ರ ಸರೋವರದ ಸೌಂದರ್ಯವನ್ನು ನಿರೀಕ್ಷಿಸುತ್ತ ಶಾಂತಮನಸ್ಸಿನಿಂದ ಒಂದು ಮೆಟ್ಟಲಿನಮೇಲೆ ತಣ್ಣಗೆ ಕುಳಿತಿದ್ದರು. ಆಗ ತಂದೆ-ಮಕ್ಕಳನಡುವೆ ಕೆಳಗೆಬರೆದಂತೆ, ಸಂಭಾಷಣವಾಯಿತು.

ವ್ಯಾಸರು—ಬಾಳಾ ಶುಕಾ, ನೀನು ಸರ್ವವಿದ್ಯೆಗಳನ್ನು ಸಂಪಾದಿಸಿದೆ. ನಿನ್ನ ಗುರುಗಳು ಗೃಹಸ್ಥಾಶ್ರಮವನ್ನು ಸ್ವೀಕರಿಸಲಿಕ್ಕೆ ನಿನಗೆ ಸಂತೋಷದಿಂದ ಅಪ್ಪಣೆಯನ್ನು ಕೊಟ್ಟಿದ್ದಾರೆ. ಆದದರಿಂದ ಕುಲ-ಶೀಲ ಸಂಪನ್ನೆಯಾದ ಒಬ್ಬ ಮುನಿಕನ್ಯೆಯನ್ನು ಹುಡುಕಿ ನಿನ್ನ ವಿವಾಹ ಮಾಡಬೇಕೆಂದೆಣಿಸಿದ್ದೇನೆ. ಬ್ರಹ್ಮಚರ್ಯಾಶ್ರಮವು ಮುಗಿದ ಬಳಿಕ ಪ್ರತಿಯೊಬ್ಬ ಪುರುಷನು ಲಗ್ನಮಾಡಿಕೊಂಡು ಗೃಹಸ್ಥಾಶ್ರಮಿಯಾಗಬೇಕೆಂದು ಶಾಸ್ತ್ರವಚನವಿರುವದು. ಇದು ನಿನಗೆ ಗೊತ್ತಿದ್ದದೇ ಅದೆ. ದೇವಋಣ, ಪಿತೃಋಣ, ಮಾತೃಋಣಗಳನ್ನು ತೀರಿಸಿ ತೃಪ್ತಿಪಡಿಸಲಿಕ್ಕೆ ವಿವಾಹಿತನಾಗುವದು ಅವಶ್ಯವದೆ. ಮಕ್ಕಳಿಲ್ಲದಿದ್ದರೆ ಮೋಕ್ಷವಿಲ್ಲ. ನೀನು ಮದುವೆ ಮಾಡಿಕೊಂಡು ನನ್ನ ಋಣತೀರಿಸು; ನೀನೂಉದ್ಧಾರನಾಗು. ಮಕ್ಕಳ ಮದುವೆಯ ಸಂಭ್ರಮವನ್ನು ನೋಡಬೇಕೆಂದು ನಾನಂತು ಈಗ ಅತ್ಯುತ್ಸುಕನಾಗಿದ್ದೇನೆ. ನಿನ್ನ ತಾಯಿ ಇದ್ದರೆ ನಿನ್ನ ಲಗ್ನಕ್ಕಾಗಿ ಇಷ್ಟೊತ್ತಿಗೆ ಗಡಿಬಿಡಿಮಾಡದೆ ಬಿಡುತ್ತಿದ್ದಿಲ್ಲ. ತಾಯಿಯ ಸ್ಥಳಕ್ಕೆ ನಾನೇ ಇರುವದರಿಂದ ಆ ಭಾರವೂ ನನ್ನ ಮೇಲೆಯೇ ಬಿದ್ದಿರುವದು. ನಿನ್ನ ಲಗ್ನವನ್ನೊಂದು ಮಾಡಿಬಿಟ್ಟರೆ ನಾನು ಕೃತಕೃತ್ಯನಾದೆನು. ಬಹುದಿವಸಗಳಿಂದ ಇದ್ದ ನನ್ನ ಬಯಕೆಯನ್ನು ನೀನು ಪೂರ್ಣಮಾಡು. ಇದರಿಂದ ನಿಜವಾಗಿ ನಿನ್ನ ಕಲ್ಯಾಣವಾಗುವದು.

ಶುಕ ( ಮನಸಿನೊಳಗೆ)—ಇಂಥ ಪೂಜ್ಯರಾದ ತಾತಂದಿರಿಗೆ ಈಗ ಏನು ಉತ್ತರಕೊಡಲಿ? ತಂದೆಗೆ ಮಗನು ಬುದ್ಧಿ ಹೇಳುವದು ಧರ್ಮವಲ್ಲ. ತಾತನು ತಾನು ಬಹಳ ಜ್ಞಾನಿಯಾಗಿದ್ದರೂ ನನಗೆ ಲಗ್ನಮಾಡಿಕೊಳ್ಳಬೇಕೆಂದು ಯಾಕೆ ಹೇಳುತ್ತಿದ್ದಾನು? ನನ್ನ ಮನಸ್ಸನ್ನು ಪರೀಕ್ಷಿಸಬೇಕೆಂದು ಇವನ ಮನದಲ್ಲಿದ್ದೀತೊ? ಇವನಿಗೆ ಈಗ ಏನು ಉತ್ತರಕೊಡಲಿ?

ವ್ಯಾಸ—ಏಕೋಬಾಳಾ, ಉತ್ತರಕೊಡಲೊಲ್ಲೆ? ನಿನ್ನ ಮನಸ್ಸಿನಲಿದ್ದದ್ದೇನು? ಮನಸ್ಸುಬಿಚ್ಚಿಹೇಳು. ನಾನು ನಿನ್ನ ಲಗ್ನಮಾಡುವದನ್ನು ಬಿಟ್ಟರೆ, ತಾಯಿ-ತಂದೆಗಳು ಮಕ್ಕಳಸಲುವಾಗಿ ಮಾಡತಕ್ಕ ಕೆಲಸಗಳಲ್ಲಿ ಒಂದನ್ನು ಬಿಟ್ಟಂತೆ ಆಗುತ್ತದೆ. ಆದದರಿಂದ ನಿನಗೆ ಅನುರೂಪಳಾದ ಕನ್ಯೆಯನ್ನು ಗೊತ್ತುಮಾಡಲಿಕ್ಕೆ ನಾಳೆ ನಾನು ಹೋಗಲಿಯಾ? ಮಾತಾಡು.

ಶುಕ—ಅಪ್ಪಾ, ತಮ್ಮ ಸನ್ನಿಧಿಯಲ್ಲಿ ನಾನೇನು ಉತ್ತರಕೊಡಲಿ? ತಾವು

ಎಲ್ಲವನ್ನು ಬಲ್ಲವರು; ಮೇಲಾಗಿ ಧರ್ಮಜ್ಞರು. ಹೀಗಿದ್ದು ಹೊಲ್ಲದವಾತನ್ನು ನನಗೆ ಯಾಕೆ ಹೇಳುವಿರಿ? ನನಗಂತು ಏನೂ ತಿಳಿಯದಾಗಿದೆ.

ವ್ಯಾಸ—ಹಸುಳಾ, ನಿನ್ನನ್ನು ಪಡೆಯಲಿಕ್ಕೆ ಎಷ್ಟೋವರ್ಷ ಘೋರವಾದ ತಪಶ್ಚರ್ಯವನ್ನು ಮಾಡಿದೆನು. ತಾಯಿಇಲ್ಲದಿದ್ದ ನಿನ್ನನ್ನು ಹಾಲುಹಣ್ಣು ಹಾಕಿ ಬಗೆಬಗೆಯಿಂದ ಸಲಹಿದೆನು. ತಂದೆಯ ಮಾತನ್ನು ಮೀರುವದು ಪುತ್ರಧರ್ಮ ವಲ್ಲ. ನಾನು ನಿನಗೆ ಕೆಡಕು ಹೇಳುತ್ತೇನೇನು? ಚಿಕ್ಕಂದಿನಲ್ಲಿ ಮಕ್ಕಳ ಅಪೇಕ್ಷೆ ಯನ್ನು ಪೂರ್ಣಮಾಡುವದು ತಂದೆ-ತಾಯಿಗಳ ಧರ್ಮವಷ್ಟೇ. ಅದೇಮೇರೆಗೆ ಮಕ್ಕಳು ದೊಡ್ಡವರಾದಮೇಲೆ ತಮ್ಮ ತಾಯಿ-ತಂದೆಗಳ ಅಪೇಕ್ಷೆಯನ್ನು ಪೂರ ಯಿಸುವದು ಅವರ ಧರ್ಮವಾಗಿದೆ. ನೀನು ವಿವಾಹಿತನಾಗಿ ನನ್ನನ್ನು ಸಂತೋಷ ಗೊಳಿಸು. ಇಷ್ಟೇ ನಾನು ನಿನಗೆ ಹೇಳಿದ್ದು. ಅನ್ಯಥಾ ಇದರಲ್ಲೇನುಂಟು?

ಶುಕ—ತಮ್ಮಂಥ ದೊಡ್ಡವರೇ ಹೀಗೆ ಹೇಳಿದಮೇಲೆ ಜ್ಞಾನಿಗಳಿಗೂ ಅಜ್ಞಾ ನಿಗಳಿಗೂ ಏನೂ ಭೇದವಿಲ್ಲೆಂದಹಾಗಾಗುತ್ತದೆ. ನಾನು ಲಗ್ನಮಾಡಿಕೊಂಡು, ಹೆಂಡತಿಯಧೀನನಾಗಲು ಹೇಳಿದಿರಿ. ಈಗಿದ್ದ ಸ್ವಾತಂತ್ರ್ಯವು ಮದುವೆಯಾದ ಬಳಿಕ ನನಗೆ ಹೇಗೆ ಸಿಕ್ಕೀತು? ವಿಷಯ ಸುಖದ ನಂಜು ಒಮ್ಮೆ ತಲೆಗೇರಿದಮೇಲೆ ಮುಂದೆಅದು ಬೇಗನೆ ಕೆಳಗಿಳಿಯಲಿಕ್ಕಿಲ್ಲ! ಅಯ್ಯಾ, ಇದೊತ್ತಟ್ಟಿಗಿರಲಿ. ಸ್ತ್ರೀಸುಖ ವಾದರೂಶಾಶ್ವತವೆನ್ನಬೇಕೇ! ಅದು ಕ್ಷಣಿಕವಾದದ್ದು. ಸ್ತ್ರೀಸೌಖ್ಯದೊರೆತಕೂಡಲೆ ಮಕ್ಕಳ ಅಪೇಕ್ಷೆಯುಂಟಾಗುತ್ತದೆ. ಬಳಿಕ ಅವರಮುಂಜಿ, ಮದುವೆಗಳ ಸಂಭ್ರಮವು; ಮುಂದೆ ಮೊಮ್ಮಕ್ಕಳು-ಮರಿಮಕ್ಕಳು; ಅದರಮುಂದೆ ಅವರ ಮಕ್ಕಳು ಅವರ ಕಾರ್ಯಾದಿಗಳು ಬಂದೇಬರುವವು. ಹೀಗೆ ಸಂಸಾರದ ಮುಕ್ತಾಯವು ಇಲ್ಲೇ ಇಲ್ಲ. ಜೇಡಹುಳದ ಜಾಳಿಗೆಯಂತೆ ಈ ಪರಿವಾರಪಾಶವು ಅಕ್ಷಯವಾಗುತ್ತಲೇ ಹೋಗುವದು. ಒಮ್ಮೆ ಮನುಷ್ಯನು ಈ ಬಲಿಯಲ್ಲಿ ಬಿದ್ದಮೇಲೆ ಪಾರಾಗುವ ಆಶೆ ಯು ಇಲ್ಲೇಇಲ್ಲ. ನಮ್ಮ ಚರ್ಮಚಕ್ಷುಗಳಿಗೆ ಈ ಪ್ರಾಪಂಚಿಕ ಬಲಿಯು ಕಾಣದಿ ದ್ದರೂ ಅದು ಎಂದೂ ಹರಿಯದಷ್ಟು ಗಟ್ಟಿಮುಟ್ಟಿಯಾದದ್ದಿರುವದು. ಇದಕ್ಕೇ ಜ್ಞಾನಿಗಳು ಮಾಯೆಯನ್ನುವರು.

ವ್ಯಾಸ—ಮಾಯೆಯ ಪ್ರಸಾರದಲ್ಲಾದರೂ ಒಂದುತರದ ಈಶ್ವರೀಸೂತ್ರವು ಕಂಡುಬರುತ್ತದೆ. ಮಾಯೆಯು ಇಲ್ಲದಿದ್ದರೆ ಈ ಜಗತ್ತಿನ ವ್ಯವಹಾರವು ನಡೆಯು ತ್ತಿದ್ದೇಇಲ್ಲ! ಸೃಷ್ಟಪದಾರ್ಥಗಳ ಗುಣಧರ್ಮಗಳನ್ನು ಕಂಡುಹಿಡಿದು ಸುಖಸಂ ಬಂಧವಾಗಿ ಈ ಪೃಥ್ವಿಯನ್ನು ಸ್ವರ್ಗದಂತೆ ಮಾಡುವ ಆಧುನಿಕ ಪ್ರಯತ್ನಗಳೆಲ್ಲ ನಡೆಯುತ್ತಿದ್ದಿಲ್ಲ! ವಿದ್ಯಾಕಲಾಕೌಶಲ್ಯಗಳ ಸುದ್ದಿ ಸಹ ಇರುತ್ತಿದ್ದಿಲ್ಲ! ಹೆಚ್ಚಿಗೇನು

ಹೇಳಲಿ? ಈ ಮಾಯಾಪಾಶದಲ್ಲಿ ಸಿಗತಕ್ಕವರೂ, ಮಾಯಾಪಾಶದಲ್ಲಿ ಸಿಗಬೇಕಿರೆಂದು ಹೇಳುವವರೂ ಸಹ ನಿರ್ಮೂಲರಾಗುತ್ತಿದ್ದಿಲ್ಲ; ಜಗತ್ತು ಇದ್ದೂ ಇಲ್ಲದಂತಾಗುತ್ತಿತ್ತು.

ಶುಕ—ನನಗೆ ಈ ಸ್ವರ್ಗಸುಖವೂ ಬೇಡ, ಈ ಮಾಯಾಪಾಶದಲ್ಲಿ ಬೀಳುವದೂ ಬೇಡ; ಈ ನರಲೋಕದಲ್ಲಿ ಸುಖವೆಲ್ಲುಂಟು? ಅಜ್ಞಾನಿಗಳು ಮಾತ್ರ ದುಃಖಕ್ಕೆ ಸುಖವೆನ್ನಹತ್ತಿದ್ದಾರೆ. ದುಃಖದ ಕೊರತೆಗೆ, ಅಥವಾ ಅದರ ತೀವ್ರವೇದನೆಯ ಅಭಾವಕ್ಕೆ ಪ್ರಾಣಿಗಳು ಸುಖವೆನ್ನಹತ್ತಿವೆ. ಹೀಗಿರಲು, ತಮ್ಮಂಥ ಜ್ಞಾನಿಗಳು ಸಹ ಸಂಸಾರದಲ್ಲಿ ಸೇರಲು ಹೇಳುವದು, ನನಗೆ ದುಃಖವೆನಿಸುತ್ತದೆ. ತಾತಂದಿರೇ, ಕಾರಾಗೃಹದಲ್ಲಿ ಬಿದ್ದ ಮನುಷ್ಯನಿಗೆ ಗೊತ್ತಾದ ಅವಧಿಯು ಮುಗಿದ ಬಳಿಕ ತಾನು ಬಿಡುಗಡೆಯಾಗುವ ಆಶೆಯಾದರೂ ಇರುವದು. ಆದರೆ ಈ ಸಂಸಾರರೂಪ-ಸ್ತ್ರೀರೂಪ ಮೋಹಪಂಜರದಲ್ಲಿ ಒಮ್ಮೆ ಸಿಕ್ಕು ಬಿದ್ದ ಬಳಿಕ ಪಾರಾಗುವದು ಸಾಧ್ಯವುಂಟೋ? ಇದಿರಲಿ, ಸ್ತ್ರೀಯೆಂಬ ಪದಾರ್ಥವು ಶುದ್ಧವಾದದ್ದೆನ್ನಬೇಕೇ? ಅದೂ ಇಲ್ಲ. ಯಾಕಂದರೆ ಪ್ರತಿಯೊಂದು ಪ್ರಾಣಿಶರೀರವು ಮಾಂಸ-ಮೇದ-ಶುಕ್ರ-ಶೋಣಿತ-ಮಲ-ಮೂತ್ರ-ಬೆವರು-ಜೊಲ್ಲು ಮುಂತಾದ ಅಸಹ್ಯ ಹೊಲಸು ಪದಾರ್ಥಗಳಿಂದ ಉಂಟಾಗಿರುತ್ತದೆ. ಅಂದ ಬಳಿಕ ಅಪ್ಪಾ, ಇದರಲ್ಲಿ ಹ್ಯಾಗೆ ಸೇರಲಿ? ತಮ್ಮ ಆಜ್ಞೆಗೆ ನಾನು ಹೊರಗಾದವನಲ್ಲ; ಆದರೆ ಹುಟ್ಟುವಾಗ ಸಹ ನನಗೆ ಸ್ತ್ರೀಸಂಪರ್ಕವಿಲ್ಲದಿರಲು, ಈಗ ಮತ್ತೆ ಆ ನಿಂದ್ಯ ಸ್ತ್ರೀಯು ಸಂಬಂಧವೇಕೆ? ಅಂತೇ ನಾನು ಆಜನ್ಮವು ಹೀಗೆಯೇ ಇದ್ದು ಆತ್ಮಸುಖದಲ್ಲಿ ಇರಬೇಕೆನ್ನುತ್ತೇನೆ. ಅಪ್ಪಾ, ಪ್ರಪಂಚದಲ್ಲಿದ್ದರೆ ಪರಮೇಶ್ವರನ ಭಕ್ತಿಗೆ ಸಹಾಯವಾಗಿ ಮೋಕ್ಷಕ್ಕೆ ಆಧಾರವಾಗುತ್ತದೆನ್ನಬೇಕೇ, ಅದೂ ಇಲ್ಲ. ಐಹಿಕ ಸುಖಸಂಪಾದನಾರ್ಥವಾಗಿಯೂ, ದುಃಖನಿವಾರಣಾರ್ಥವಾಗಿಯೂ ಸಂಸಾರಿಕರು ಯಾವಾಗಲೂ ತಳಮಳಿಸುತ್ತಿರಬೇಕಾಗುವದು. ಅವರಿಗೆ ಪರಮೇಶ್ವರನಲ್ಲಿ ತಮ್ಮ ಅಂತಃಕರಣವನ್ನು ಅರ್ಪಿಸಲಿಕ್ಕೆ ಸಮಯವೇ ಉಳಿಯುವದಿಲ್ಲ. ಬ್ರಹ್ಮರಸಸ್ವಾದದ ಮಾತಂತು ಅವರಿಗೆ ದೂರೇ ಉಳಿಯಿತು. ಈಗ ನನಗೆ ಮದುವೆಯಾಗದ್ದು ಬಲು ಸೊಗಸೆನಿಸಿದೆ. ಯಾರ ಸಹಾಯವೂ ನನಗೆ ಬೇಕಾಗಿಲ್ಲ. ಯಾಕಂದರೆ ಅರಣ್ಯದೊಳಗಿನ ಸೆಲೆಗಳು ತಾವೇ ನನ್ನ ನೀರಡಿಕೆಯನ್ನು ಹಿಂಗಿಸಲಿಕ್ಕೆ ಕೈಕಟ್ಟಿ ನಿಂತವೆ. ಗಿಡಬಳ್ಳಿಗಳು ನನ್ನ ಹಸಿವೆಯನ್ನು ಹೋಗಲಾಡಿಸುವವು. ಸೇವೆಗಾಗಿ ಈ ಕೈಗಳುಂಟು. ಹಣ್ಣು-ಹಂಪಲುಗಳು ಬೇಕಾದಾಗ ನನ್ನನ್ನು ಅಲ್ಲಿಗೆ ಒಯ್ಯಲು ಕಾಲುಗಳು ಸಮರ್ಥವಾಗಿರುವವು. ಜಠರಾಗ್ನಿಯು ಪಾಕಸಿದ್ಧಮಾಡಿಕೊಳ್ಳಲಿಕ್ಕೆ ಮುಂದೆಯೇ ನಿಂತಿರುವದು. ಯಾರ

ಭೀತಿಯೂ ನನಗಿಲ್ಲ. ಸರ್ವಸಾಕ್ಷಿಯಾದ ಅಂತರಾತ್ಮನ ಹೊರತು ಉಳಿದವರಿಗೆ ಯಾಕೆ ಹೆದರಬೇಕು? ಯಾರಿಗೆಯಾರು? ನನ್ನ ಮನಸ್ಸು ಆ ಮಹಾಹಾರಾಯನಲ್ಲಿ ಮುಳುಗಿಹೋಗಿರುತ್ತದೆ. ಆತನ ದರ್ಶನದ ಮುಂದೆ ಸರ್ವಜಗತ್ತು ತುಚ್ಛವೆನಿಸುವದು. ಹೀಗಿರಲು ಈ ಜಗತ್ತಿನೊಳಗಿನ ಸಂಸಾರ ಸೌಖ್ಯವು ತುಚ್ಛವೆನಿಸುವದರಲ್ಲಿ ಆಶ್ಚರ್ಯವೇನು? ಚಿಕ್ಕಂದಿನಲ್ಲಿ ತಾವು ಮಾಡಿದ ಉಪಕಾರವನ್ನು ನಾನು ಎಷ್ಟು ಮಾತ್ರವೂ ಮರೆತಿಲ್ಲ. ಮಾತಾಪಿತೃಗಳು ಮಕ್ಕಳಮೇಲೆ ಮಾಡುವ ಅನಂತೋಪಕಾರಗಳನ್ನು, ಗುರುಗಳ ಮುಖದಿಂದ ಕೇಳಿದ್ದು ನನ್ನ ಸ್ಮರಣದಲ್ಲಿ ಇಲ್ಲವೆಂತಲ್ಲ. ತಮ್ಮ ಮನಸ್ಸಿಗೆ ದುಃಖಕೊಡಬೇಕೆಂತಲೂ ನನ್ನ ಇಚ್ಛೆ ಇಲ್ಲ. ಆಯ್ಯಾ, ನಾನು ತಮ್ಮ ಪ್ರೀತಿಯ ಶಿಷ್ಯನಿದ್ದೇನೆ, ಶಿಶುವಿದ್ದೇನೆ. ನನ್ನಮೇಲೆ ದಯೆದೋರಿರಿ; ಈ ದುಃಖಮೂಲವಾದ ಮದುವೆಯೆಂಬ ಜೊಂಜಾಟದಿಂದ ನನ್ನನ್ನು ದೂರ ಮಾಡಿರಿ!!

ಮಗನ ಬಾಯಿಂದ ಈ ಶಬ್ದಗಳು ಹೊರಬೀಳಲಾಗಿ ವ್ಯಾಸರು ಆಶ್ಚರ್ಯಚಕಿತರಾದರು. ಈ ಬ್ರಹ್ಮಜ್ಞಾನವು ಕೇವಲ ಗ್ರಂಥಾಧ್ಯಯನ ಮಾತ್ರವಾದದ್ದುಂಟು. ಇದು ಕಡೆತನಕ ನಿಲ್ಲತಕ್ಕದ್ದಲ್ಲ. ಬಾಲವೈರಾಗ್ಯವು ಹುಡುಗತನದಲ್ಲಿ ಒಮ್ಮೊಮ್ಮೆ ಬಂದೇ ಬರುತ್ತಿರುತ್ತದೆ. ಇವನಾದರು ಇನ್ನೂ ಚಿಕ್ಕವನು. ಇವನಿಗೆ ಬುದ್ಧಿ ಹೇಳಿ ಸಂಸಾರಮಾರ್ಗಕ್ಕೆ ಹಚ್ಚುವದೇ ಒಳಿತು. ಯಾಕೆಂದರೆ ಬ್ರಹ್ಮಚರ್ಯ-ವಾನಪ್ರಸ್ಥ-ಸನ್ಯಾಸ ಈ ಆಶ್ರಮಗಳು ಕಠಿಣಸಾಧ್ಯವಾಗಿರುವವು. ದೂರಿನ ಗುಡ್ಡವು ಕಣ್ಣಿಗೆ ನುಣ್ಣಗೆ ಕಾಣಿಸುವಂತೆ ಈತನಿಗೆ ಸನ್ಯಾಸವು ಸುಲಭವಾಗಿ ತೋರಿದೆ.

ವ್ಯಾಸ—ತಮ್ಮ ಶುಕಾ, ನೀನನ್ನುವದೆಲ್ಲವು ನಿಜ; ಆದರೆ ಅಜನ್ಮನೈಷ್ಠಿಕ ಬ್ರಹ್ಮಚಾರಿಯಾಗಿ ಅದನ್ನು ಪಾಲಿಸುವದು ತೀರ ಕಠಿಣವದೆ. ಹುಚ್ಚಾ, ದೊಡ್ಡ ದೊಡ್ಡ ನಿಗ್ರಹಿಪುರುಷರೂ ಸಹ ಹೊತ್ತಿನಲ್ಲಿ ಬ್ರಹ್ಮಚರ್ಯದಿಂದ ಭ್ರಷ್ಟರಾಗಿ ಹೋಗಿದ್ದಾರೆ. ಲೋಕದಲ್ಲಿ ಅವರ ಅಪಖ್ಯಾತಿಯು ಈವರೆಗೂ ಅಖಂಡವಾಗಿ ನಿಂತಿರುತ್ತದೆ. ನಿನ್ನ ಕುಲಗುರುಗಳಾದ ಬೃಹಸ್ಪತ್ಯಾಚಾರ್ಯರು ಸಹ ಗೃಹಸ್ಥಾಶ್ರಮವನ್ನು ಸ್ವೀಕಾರಮಾಡಿರಲು ನಿನ್ನ ಪಾಡೇನು? ನೀನು ಲಗ್ನಮಾಡಿಕೊಳ್ಳದಿದ್ದರೆ ನಿನ್ನಮೇಲೆ ನನ್ನ ಪ್ರಸನ್ನತೆಯುಂಟಾಗಲಾರದು. ತಂದೆಯ ಮನಸ್ಸಿಗೆ ದುಃಖಕೊಟ್ಟು ಧರ್ಮಾಚರಣೆಯನ್ನು ಮಾಡುವದು ಮಗನ ಕೆಲಸವಲ್ಲ. ಮಕ್ಕಳ ಕಲ್ಯಾಣವನ್ನು ಬಯಸುವದು ತಂದೆಯ ಧರ್ಮವಾಗಿದೆ. ನಿನ್ನ ಹಿತಕ್ಕಾಗಿಯೇ ನೀನು ಮದುವೆಮಾಡಿಕೊಳ್ಳಬೇಕೆಂದು ಅತ್ಯಾಗ್ರಹದಿಂದ, ನಾನು ಹೇಳುತ್ತೇನೆ.

ಗೃಹಸ್ಥಾಶ್ರಮಿಯಾಗಿ ನೀನು ಆ ಆಶ್ರಮಕ್ಕೆ ಉಚಿತವಾದ ಕರ್ಮಗಳನ್ನು ಮಾಡದಿದ್ದರೆ ಎಂದೂ ಗತಿಕಾಣಲಾರೆ.

ಶುಕ—ಅಪ್ಪಾ, ತಮ್ಮ ಪ್ರೀತಿಯ ಮಾತಿನಿಂದ ನನಗೆ ಸಂತೋಷವಾಯಿತು. ಆದರೆ ಬೃಹಸ್ಪತ್ಯಾಚಾರ್ಯರು ನನ್ನ ಕುಲಗುರುಗಳೂ, ವಿದ್ಯಾಗುರುಗಳೂ ಇರುವದು ನಿಜವು. ಅವರು ಅತ್ಯಂತವಾಗಿ ನನಗೆ ಪೂಜ್ಯರೇ ಸರಿ. ಈ ದೃಷ್ಟಿಯಿಂದ ಎಷ್ಟುಮಾತ್ರವೂ ನಾನು ಅವರಲ್ಲಿ ದೋಷವಿಡಲಾರೆನು. ಯಾವ ಶಿಷ್ಯನೂ ಗುರುಗಳಮೇಲೆ ದೋಷವಿಡಲಾಗದೆಂದು ನಮ್ಮ ಭಾರತೀಯರ ಶೀಲವುಂಟು. ಗುರುಗಳು ಲಗ್ನಮಾಡಿಕೊಂಡರೆಂದು, ಶಿಷ್ಯನೂ ಮಾಡಿಕೊಳ್ಳಬೇಕೆಂದು ಹೇಳುವದು ಮಾತ್ರ ನನಗೆ ಸಮ್ಮತವಿಲ್ಲ. ಅವರು ನನ್ನ ವಿದ್ಯಾಗುರುಗಳಾದರೂ ಅವಿದ್ಯೆಯೇ ಅವರನ್ನು ನುಂಗಿನೀರು ಕುಡಿದಿರುತ್ತದೆಂದು ನಾನು ಖಂಡಿತವಾಗಿ ಹೇಳುತ್ತೇನೆ. ಶಾಶ್ವತವಾದ ಸೌಖ್ಯವನ್ನು ಕೊಡುವ ವಿದ್ಯೆಯೇ ವಿದ್ಯೆಯು. ಈಗ ನೋಡಿರಿ. ಪ್ರಪಂಚದಲ್ಲಿ ಒಂದು ಪದಾರ್ಥದ ಮೇಲೆ ನಮ್ಮ ಪ್ರೀತಿಯು ಇರುತ್ತಿರಲು, ಅದು ನಷ್ಟವಾದ ಕೂಡಲೆ ಅಷ್ಟೇ, ಕಿಂಬಹುನಾ ಅದಕ್ಕಿಂತ ಹೆಚ್ಚು ನಮಗೆ ದುಃಖವಾಗುತ್ತದೆ. ಸಂಸಾರಿಕರಿಗೆ ಅಡಿಗಡಿಗೆ ಇದರ ಪ್ರತೀತಿಯು ಬರುತ್ತಿರುವದು. ಇದರಿಂದ ಸಂಸಾರಸುಖವು ಅಶಾಶ್ವತವಾದದ್ದೆಂದು ಹೇಳಬಾರದೇನು? ಅಸ್ಥಿರವಾದ ಸುಖಕ್ಕೆ ಒಳಗಾದ ಗುರುಗಳ ಉದಾಹರಣೆಯಿಂದ ನಾನು ಸಮ್ಮತಪಡುವದಿಲ್ಲ. ಸಂಸಾರದಲ್ಲಿ ಸಿಗಬೀಳದಂಥ ವಿದ್ಯೆಯನ್ನೋದಿದವನೇ ವಿದ್ವಾಂಸನು. ಅವನೇ ಶಾಸ್ತ್ರಿಯು, ಅವನೇ ನೈಯಾಯಿಕನು, ಅವನೇ ವೈಯಾಕರಣಿಯು. ಶರೀರವನ್ನು ಸವಿಸುವಂಥ, ಕಣ್ಣುಗಳನ್ನು ಕ್ಷೀಣಗೊಳಿಸುವಂಥ, ಆಯುಷ್ಯವನ್ನು ನಾಶಗೊಳಿಸುವಂಥ, ದುರಭಿಮಾನವನ್ನು ಬೆಳಿಸುವಂಥ, ವಿಷಯೇಚ್ಛೆಯನ್ನು ಹೆಚ್ಚಿಸುವಂಥ ಓದಿನಿಂದ ಏನುಪ್ರಯೋಜನವು? ಗೃಹಸ್ಥಾಶ್ರಮ ಈ ಶಬ್ದದೊಳಗಿನ "ಗೃಹ" ಈ ಶಬ್ದವನ್ನು ಅನ್ನಲಿಕ್ಕೆಕೂಡ ನನಗೆ ಹೆದರಿಕೆ ಬರುವದು. ಆ ಶಬ್ದ ನಿರ್ದಿಷ್ಟ ವಸ್ತುವು ಮನುಷ್ಯನನ್ನು ತನ್ನೊಳಗೆ ಮೊಸಳೆಯಂತೆ ಗ್ರಹಣಮಾಡುತ್ತದೆ. (ಜಗ್ಗುತ್ತದೆ.) ಎಂತಲೇ ಅದಕ್ಕೆ ಗೃಹವೆಂಬ ಸಂಜ್ಞೆಯುಂಟಾಗಿದೆ. ಒಮ್ಮೆ ಗೃಹಸ್ಥನಾದರೆ ತೀರಿತು. ಅವನು ಸಾಯುವವರೆಗೆ ಗೃಹಕೃತ್ಯದಿಂದ ಪಾರಾಗಲಾರನು.

"ಬೇಕಾದದ್ದು ಬೆಲ್ಲಕ್ಕಿಂತ ಸವಿ, ಬೇಡಾದದ್ದು ಬೇವಿಗಿಂತ ಕಹಿ" ಹೀಗೆ ನಾಣ್ಣುಡಿ ಇರುತ್ತದಷ್ಟೇ? ನನಗೆ ಸಂಸಾರದ ಸುಖವುಬೇಡ. ಗೃಹಸ್ಥಾಶ್ರಮದಿಂದ ನನಗೆಸುಖವಾಗಲಾರದು. ಹೊತ್ತುಹೊತ್ತಿಗೆ ಸರಿಯಾಗಿ ಆ ಆಶ್ರಮದ ಕಾರ್ಯಗಳು ನನ್ನಿಂದ ಪಾಲಿಸುವದಾಗಲಿಕ್ಕಿಲ್ಲ. ಅತಿಥಿಗಳು ವಿಮುಖರಾಗಿ ಹೋದಾರು! ಹೆಂಡ

ತಿಗೂ ನನ್ನಿಂದ ಸುಖವಾಗಲಿಕ್ಕಿಲ್ಲ. ಹೀಗೆ ಲೌಕಿಕಸುಖಕ್ಕೂ ಪಾರಲೌಕಿಕ
ಸುಖಕ್ಕೂ ನಾನು ಎರವಾಗಬೇಕಾಗುತ್ತದೆ. ತಾವು ನನ್ನ ಹಡೆದ ತಂದೆಗಳು. ನನ್ನ
ಅನಹಿತವನ್ನು ತಾವು ಎಷ್ಟೂ ಬಯಸುವಂಥವರಲ್ಲ. ಆಗ್ರಹ ಮಾಡಬೇಡಿರಿ.
ಮದುವೆಗಾಗಿ ನನ್ನ ಮನಸ್ಸಿಲ್ಲ. ಸ್ವರ್ಗಸುಖವನ್ನಪೇಕ್ಷಿಸುವವರು ಯಜ್ಞಮೊದ
ಲಾದ ಕರ್ಮಗಳನ್ನು ಮಾಡಬೇಕೆಂದು ಕೇಳಿದ್ದೇನೆ. ಸ್ವರ್ಗಸುಖವೂ ಶಾಶ್ವತ
ವೆನ್ನುವಂತಿಲ್ಲ. ಪುಣ್ಯವು ತೀರಿದಮೇಲೆ ಅವರು ಮರಳಿ ಈ ಮೃತ್ಯುಲೋಕಕ್ಕೆ
ಬರಬೇಕಾಗುವದು. ಆತ್ಮಸುಖಕ್ಕೆ ಹಂಬಲಿಸುವನಾನು ಗೃಹಸ್ಥಾಶ್ರಮಿಯಾಗಲಿ
ಚ್ಛಿಸಲಾರೆನು. ಈ ಹಸುಳನನ್ನು ಹ್ಯಾಗಾದರೂಮಾಡಿ ಸಂರಕ್ಷಿಸಿರಿ. ಸ್ತ್ರೀವ್ಯಾ
ಮೋಹಕ್ಕೆ ಸಿಕ್ಕಿದ ಮನುಷ್ಯನು ಕೇವಲ ಸೂತ್ರದ ಬೊಂಬೆಯಂತೆ ಪರತಂತ್ರನಾಗಿ
ಬಾಳಬೇಕಾಗುವದು. ಹೇಗೆ ವಿಚಾರಮಾಡಿದರೂ ನೀವು ಹೇಳುವ ಮಾತಿ
ನಲ್ಲಿ ನನಗೆ ಸುಖಕಾಣುವದಿಲ್ಲ. ಓದಿ, ಬರೆದು, ಅಧ್ಯಯನಮಾಡಿದಂಥ ನಾ-
ನಂತೂ ಲಗ್ನಮಾಡಿಕೊಳ್ಳುವದಿಲ್ಲ. ಮೋಹಗೊಂಡು ಸಲಹುವ ಮಡದಿ-ಮಕ್ಕ
ಳು ಕಾಲವಶಾತ್ತಾಗಿ ಸತ್ತರೆ, ಆಗ ಸ್ಮಶಾನವೈರಾಗ್ಯವು ಮುಂದೆಬಂದು, ಇನ್ನು
ಸಂಸಾರಸಾಕು ಎಂದು ಪ್ರಾಪಂಚಿಕರೇ ನುಡಿಯುವರು. ಹೀಗಿರಲು ತಮ್ಮಂಥ
ಜ್ಞಾನಿಗಳ ಹೊಟ್ಟೆಯಿಂದ ಹುಟ್ಟಿ, ದೇವಗುರುಗಳಂಥ ಜ್ಞಾನಿಗಳಲ್ಲಿ ಅಧ್ಯಯನ
ಮಾಡಿ, ಜ್ಞಾನವಂತನಾದ ನನಗೆ, ಮದುವೆಗಾಗಿ ಒತ್ತಾಯಪಡಿಸುವದು ಪುತ್ರವತ್ಸ
ಲರಾದ ತಮಗೆ ಸರಿಯೇ? ಅಪ್ಪಾ, ತಮಗೆ ಶರಣುಬಂದಿದ್ದೇನೆ! ಉದ್ಧಾರಮಾಡಿರಿ!
ಸಂಸಾರ ಸಮುದ್ರದಲ್ಲಿ ನನ್ನನ್ನು ನೂಕಬೇಡಿರಿ!!!

ವ್ಯಾಸ—ಶುಕಾ, ನೀನು ಓದಿಕೊಂಡವನಿರುತ್ತೀಯೆಂಬದನ್ನು ನಾನು ಬಲ್ಲೆ
ನು. ಆದರೆ ನೀನು ಕ್ರಮವಾಗಿ ಆಶ್ರಮಗಳನ್ನು ಪಾಲಿಸುತ್ತ ಹೋಗಿದ್ದರೆ ನನಗೆ ಚಿಂತೆ
ಯುಂಟಾಗುತ್ತಿದ್ದಿಲ್ಲ. ಮೊದಲನೇ ಮೆಟ್ಟಿನಿಂದ ನಡುವಿನ ಮೆಟ್ಟುಗಳನ್ನು ಬಿಟ್ಟು
ಕಡೆಯ ಮೆಟ್ಟಿಗೇ ಹಾರಬೇಕೆಂಬ ನಿನ್ನ ಭ್ರಮೆಗೆ ನಾನು ಕಳವಳಿಸುತ್ತೇನೆ. ನೆಲ
ವಿಗೆ ಹಾರದ ಬೆಕ್ಕು ಸ್ವರ್ಗಕ್ಕೆ ಹಾರಹೋದಂತೆ, ನಿನ್ನ ಅವಸ್ಥೆಯಾದೀತೆಂದೂ,
ವ್ಯಾಸಪುತ್ರನು ತನಗೆ ಹೊಲ್ಲದ ಹಾದಿಯನ್ನು ಹಿಡಿದು ಕೊನೆಗೆ ಭ್ರಷ್ಟನಾದನೆಂದೂ,
ಅಪಕೀರ್ತಿಯು ನಿನಗೂ, ನನಗೂ ಉಂಟಾಗಬಾರದೆಂತಲೇ ಇಷ್ಟೊಂದು ಕಳ
ಮೆಯಿಂದ ನಿನಗೆ ಹೇಳುತ್ತೇನೆ. ಹುಡುಗಾ, ನೀನು ಇನ್ನೂ ಚಿಕ್ಕವನು. ಪೂ-
ರ್ವಾಪರಜ್ಞಾನವು ನಿನಗಿಲ್ಲ. ಬರಿಯ ಓದಿನಿಂದ ಏನಾದೀತು! ಅನುಭವಬೇಕು
ಅಂತೇ ಶಾಸ್ತ್ರಕಾರರು ವಿದ್ಯೆಯಂತೆ ವಯಸ್ಸಿಗಾದರೂ ಬಹಳ ಮಹತ್ವವನ್ನು
ಕೊಟ್ಟಿದ್ದಾರೆ. ಜಗತ್ತಿನ ಅನುಭವವು ನಿನಗೆ ಪೂರ್ಣವಿಲ್ಲದ್ದರಿಂದಲೇ ನೀನು

ಪ್ರಪಂಚಕ್ಕೆ ಇಷ್ಟೊಂದು ಹೆದರುತ್ತೀ. ಮೂರ್ಖ, ಪ್ರಪಂಚವೆಂದರೆ ಕಾರಾಗೃಹವೇನು? ತಪ್ಪುಗಾರರನ್ನು ರಾಜಾಧಿಕಾರಿಯು ಬಂದೀಖಾನೆಯಲ್ಲಿ ನೂಕುವಂತೆ ನಿನ್ನನ್ನು ಯಾರು ನೂಕುವರು. ನೂಕಿದರೂ ಅದರಿಂದ ನಿನಗೆ ಆಗತಕ್ಕ ದುಃಖವೇನು? ಒಂದುವೇಳೆ ಒಬ್ಬನು ಮತ್ತೊಬ್ಬನನ್ನು ಪ್ರತಿಬಂಧದಲ್ಲಿಡುವ ಆಲೋಚನೆ ಮಾಡಿದರೆ, ಅವನು ಆತನ ದೇಹವನ್ನು ಮಾತ್ರ ಪ್ರತಿಬಂಧದಲ್ಲಿಡಬಹುದು. ದೇಹವು ಬೇಕಾದಲ್ಲಿ ಬಿದ್ದಿರಲಿ, ಮನಸ್ಸೊಂದು ತನ್ನ ಸ್ವಾದೀನದಲ್ಲಿದ್ದರೆ ಸಾಕು. ಮನಸ್ಸಿನಮೇಲೆ ಯಾರ ಅಧಿಕಾರ ನಡೆಯುವದು? ಮನಸ್ಸನ್ನು ಅಧೀನದಲ್ಲಿಟ್ಟು ಕೊಳ್ಳುವ ಸಾಮರ್ಥ್ಯವು ನಿನ್ನಲ್ಲಿದ್ದ ಬಳಿಕ ಮೋಹ-ಮಾಯಾದಿಗಳು ನಿನ್ನನ್ನೇನು ಮಾಡಿಯಾವು? ಅಂತೇ ಲೌಕಿಕಕ್ಕೇ ಆಗಲಿ ಗೃಹಸ್ಥಾಶ್ರಮಿಯಾಗೆಂದು ನಾನು ನಿನಗೆ ಹೇಳುತ್ತೇನೆ. ಅಂತಃಕರಣದಲ್ಲಿ ಯತಿಯಾಗಿರು, ಬ್ರಹ್ಮಚಾರಿಯಾಗಿರು; ನಿನಗೆ ಯಾರು ಬೇಡೆನ್ನುವರು? ಗೃಹಸ್ಥಾಶ್ರಮದ ಮಹತ್ವವನ್ನು ಎಷ್ಟೆಂತ ಹೇಳಬೇಕು? ನ್ಯಾಯದಿಂದ ವಿತ್ತಸಂಪಾದನೆ ಮಾಡಿ, ಶಾಸ್ತ್ರದಲ್ಲಿ ಹೇಳಿದಂತೆ ಆಶ್ರಮಕ್ಕೆ ಯೋಗ್ಯವಾದ ಕರ್ಮಗಳನ್ನು ನೆರವೇರಿಸಿ, ಅಸತ್ಯ ನುಡಿಯದೆ ಭಕ್ತಿಯಿಂದ ಬಾಳ್ವೆಮಾಡುವ ಗೃಹಸ್ಥನು ನಿಜವಾಗಿ ಮುಕ್ತನಾಗುವನು. ವೈರಾಗಿಯಾಗಿ ತಲೆ ಬೋಳಿಸಿಕೊಂಡು, ಭಗವೀಬಟ್ಟೆಗಳನ್ನುಟ್ಟುಕೊಂಡು ತಿರುಗಿದರೆ ಮೋಕ್ಷಸಾಧನೆಯಾಗುವದೆಂದು ನೀನು ತಿಳಿದಿದ್ದರೆ ಅದು ಸರ್ವಥಾ ತಪ್ಪು.

ತಂದೆ-ಮಕ್ಕಳ ಈ ಸಂವಾದವಾಗುವದರೊಳಗಾಗಿ ಬಹಳರಾತ್ರಿಯಾಯಿತು. ವಾದದ ಭರದಲ್ಲಿ ಅವರಿಗೆ ಯಾತರ ಪರಿವೆಯೂ ಇರಲಿಲ್ಲ. ಮೇಲಾಗಿ ಅಂದು ಪೌರ್ಣಿಮೆಯಾದದರಿಂದ ಹಿಟ್ಟು ಚಲ್ಲಿದಂತೆ ಬೆಳದಿಂಗಳು ಬಿದ್ದಿತ್ತು. ಸುತ್ತಲಿನ ವನಶ್ರೀಯು ರಾತ್ರಿಯಲ್ಲಿ ಬೇರೊಂದು ಬಗೆಯಾಗಿ ಆನಂದಗೊಳಿಸುತ್ತಿತ್ತು. ಹೂಗೊಳದೊಳಗಿನ ಸುವಾಸನೆಯಿಂದ ಸಮಾಧಾನವೂ ಉಂಟಾಗಿತ್ತು. ಕೂಡಲೆ ಅವರು ತಮ್ಮ ಆಶ್ರಮಕ್ಕೆ ಹೋಗಿ ಕೃಷ್ಣಾಜಿನ-ದರ್ಭಾಸನಗಳ ಶಯ್ಯೆಯಲ್ಲಿ ಪವಡಿಸಿದರು.

---

## ೫ ಭಾಗವತ ಶ್ರವಣ.

ಮರುದಿವಸ ಮುಂಜಾನೆ ಶುಕರನ್ನು ಕರೆದು ವ್ಯಾಸರು ಹೇಳಿದ್ದೇನಂದರೆ, ಮುದ್ದುಮಗುವೇ, ಗೃಹಸ್ಥಾಶ್ರಮದ ಸಾರಸ್ಯವನ್ನೆಷ್ಟು ವರ್ಣಿಸಿದರೂ ತೀರದು. ಮಧ್ಯಾಹ್ನಸಮಯದಲ್ಲಿ ಹಸಿದು ಬಂದ ಬ್ರಹ್ಮಚಾರಿ, ಯತಿ, ವ್ರತಸ್ಥ, ವಾನಪ್ರಸ್ಥ ಮೊದಲಾದವರು ಅನ್ನದದೆಸೆಯಿಂದ ಗೃಹಸ್ಥಾಶ್ರಮಿಯನ್ನು ಆಶ್ರಯಿಸು

ತ್ತಾರೆ. ಪ್ರಾಣತೃಪ್ತಿಗಾಗಿ, ಅನ್ನ ಸಮರ್ಪಣೆ ಮಾಡುವ ಗೃಹಸ್ಥನ ಯೋಗ್ಯತೆಯು ನ್ನೆಷ್ಟು ವರ್ಣಿಸಬೇಕು? ಯತಿಯೇ ಮೊದಲಾದಅತಿಥಿಗಳನ್ನು ಅನ್ನದಾನಾದಿಗಳಿಂದ ಆದರಿಸುವದೂ, ಅವರಕೂಡ ಮೃದುಮಧುರವಾದ ಭಾಷಣಗಳನ್ನಾಡುವದೂ, ವಸ್ತ್ರಪ್ರಾವರಣಗಳನ್ನು ಕೊಡುವದೂ ಇವು ಪ್ರಾಪಂಚಿಕರಿಗೆ ಮಾತ್ರ ಸಾಧ್ಯವಾಗಿವೆ. ನಿಜವಾಗಿ ನೋಡಿದರೆ, ಈ ಕೃತ್ಯಗಳಂಥ ಪುಣ್ಯಕರ ಕೃತ್ಯಗಳು ಇನ್ನಾವವೂ ಇಲ್ಲ. ಇಂಥ ಸತ್ಕೃತ್ಯಗಳು ಯಾವ ಆಶ್ರಮದಲ್ಲಿ ಅವಿಚ್ಛಿನ್ನವಾಗಿ ಸಾಗುವವೋ ಅಂಥ ಗೃಹಸ್ಥಾಶ್ರಮಕ್ಕೆ ಯಾವನು ಹೆಸರಿಟ್ಟಾನು? ನೀನು ಅಲ್ಪವಯಿಯೂ ಅನನುಭವಿಯೂ ಆಗಿರುತ್ತೀ. ನೀನು ಯಾವ ಆಶ್ರಮಕ್ಕೂ ದೋಷ ಕೊಡಬಾರದು. ಎಲ್ಲ ಆಶ್ರಮಗಳು ತಮ್ಮ ತಮ್ಮ ಯೋಗ್ಯತೆಯಂತೆ ಅವರವರಿಗೆ ಮಹತ್ವದವೇ ಆಗಿವೆ. ಆಶ್ರಮಗಳನ್ನು ದೂಷಿಸುವದು ದೊಡ್ಡ ಅಪರಾಧವೆಂದು ಶಾಸ್ತ್ರಕಾರರು ಹೇಳಿದ್ದಾರೆ ಗೃಹಸ್ಥಾಶ್ರಮವನ್ನೊಂದು ಬಿಟ್ಟು ಉಳಿದ ಬ್ರಹ್ಮಚರ್ಯಾದಿ ಆಶ್ರಮಗಳು ಕಷ್ಟಕರವಿರುವದರಿಂದ, ಹೆಜ್ಜೆ ಹೆಜ್ಜೆಗೆ ಭ್ರಷ್ಟವಾಗುವ ಭಯವು ಅವುಗಳಲ್ಲಿ ಉಂಟು. ಸ್ಮೃತಿಕಾರರು 'ಗೃಹಸ್ಥಾಶ್ರಮವು ಎಲ್ಲ ಆಶ್ರಮಗಳ ತಂದೆ'ಎಂದು ಒಂದೆಡೆಯಲ್ಲಿ ಉಲ್ಲೇಖಿಸಿದ್ದಾರೆ. ವಸಿಷ್ಠಾದಿ ಮಹರ್ಷಿಗಳುಕೂಡ ಗೃಹಸ್ಥಾಶ್ರಮವನ್ನು ಸ್ವೀಕಾರಮಾಡಿದ್ದಾರೆ. ವೇದೋಕ್ತ ಕರ್ಮಗಳನ್ನು ಆಚರಿಸುವವರಿಗೆ ಸ್ವರ್ಗ, ಮೋಕ್ಷ, ಸತ್ಕುಲಪ್ರಸೂತತೆ ಮೊದಲಾದವುಗಳು ಅಶಕ್ಯವೆನಿಸಲಾರವು. ಆಶ್ರಮದಿಂದ ಆಶ್ರಮಕ್ಕೆ ಪಾಜ್ಞವಾಗಿ ಹೋಗಬೇಕಲ್ಲದೆ, ಅವಿಚಾರದಿಂದ ನಡುವಿನ ಆಶ್ರಮಗಳನ್ನುಉಲ್ಲಂಘಿಸಬಾರದು. ಬಾಲಕಾ, ಲಗ್ನಮಾಡಿಕೊಳ್ಳು; ಗೃಹ್ಯಾಗ್ನಿಯನ್ನಿಡು; ಆಲಸ್ಯಬಿಟ್ಟು, ಆಶ್ರಮೋಚಿತ ಕೃತ್ಯಗಳನ್ನು ಪೂರೈಸು;ದೇವ-ಪಿತೃ-ಮನುಷ್ಯ ಮುಂತಾದವರನ್ನು ತೃಪ್ತಿಬಡಿಸು; ಧಾರ್ಮಿಕನಾದ ಮಗನನ್ನು ಪಡೆ; ಮಗನನ್ನು ಗೃಹಸ್ಥಾಶ್ರಮಕ್ಕೆ ಹಚ್ಚು; ಬಳಿಕ ವನಕ್ಕೆ ಹೋಗು; ಅಲ್ಲಿಯೂ ಉತ್ತಮವಾದ ವ್ರತಾಚರಣೆ ಮಾಡು; ಶರೀರವನ್ನು ದೇವರ ಸ್ಮರಣದಲ್ಲಿ ಸವಿಸು. ಇಷ್ಟೆಲ್ಲ ಆದಮೇಲೆ ಚತುರ್ಥಾಶ್ರಮವನ್ನು ಸ್ವೀಕರಿಸು. ಮನಸ್ಸನ್ನೂ ಐದು ಜ್ಞಾನೇಂದ್ರಿಯಗಳನ್ನೂ ತಡೆಯುವದು ಬಲು ಅಸಾಧ್ಯವದೆ. ಇವು ಅವಿವಾಹಿತನನ್ನು ಉನ್ಮತ್ತನನ್ನಾಗಿ ಮಾಡುವವು. ಪುರುಷನನ್ನು ಅಪುರುಷನನ್ನಾಗಿಯೂ, ಮನುಷ್ಯನನ್ನು ಪಶುವನ್ನಾಗಿಯೂ,ವಿವೇಕಿಯನ್ನು ಅವಿವೇಕಿಯನ್ನಾಗಿಯೂ ಮಾಡುವವು. ಆದದರಿಂದ ಹುಡುಗಾ, ಅವುಗಳನ್ನು ಸ್ವಾಧೀನದಲ್ಲಿಡುವದಕ್ಕಾಗಿಯೇ ವಿವಾಹಮಾಡಿಕೊಳ್ಳು. ಮುಪ್ಪಿನಲ್ಲಿ ಅವು ಶಿಥಿಲವಾದ ಕೂಡಲೆನೀನೇ ವಿರಕ್ತನಾಗುವೆ. ಶುಕಾ, ನೀನಂತೂ ಈಗ ತೀರ ಚಿಕ್ಕವನು. ವಿಶ್ವಾಮಿತ್ರರಂಥ

ನಿಗ್ರಹಿ ಮುನಿಗಳಿಂದ ಸಹ ಇಂದ್ರಿಯ ದಮನ ಮಾಡುವದಾಗಲಿಲ್ಲ. ಅವರು ಅನ್ನಾಹಾರಾದಿಗಳನ್ನು ತೊಲಗಿ ಮೂರು ಸಾವಿರ ವರ್ಷಗಳ ಗಟ್ಟಲೆ ತಪಸ್ಸು ಮಾಡಿದರೂ ಅದೆಲ್ಲ ವ್ಯರ್ಥವಾಗಿ, ಮೇನಿಕೆಯನ್ನು ನೋಡಿದಕೂಡಲೆ ಅವಳಮೇಲೆ ಆ ಮಹರ್ಷಿಯ ಮನಸ್ಸು ಹರಿಯಿತು. ವಿಶ್ವಾಮಿತ್ರರು ಅವಳೊಡನೆ ಎಷ್ಟೋವರ್ಷ ಪ್ರಪಂಚಮಾಡಿದರು. ಮೇನಿಕೆಯಿಂದಲೇ ಶಕುಂತಲೆಯು ಹುಟ್ಟಿದಳೆಂಬದು ಸರ್ವಪ್ರಸಿದ್ಧಿಯುಂಟು. ನಿಮ್ಮ ಅಜ್ಜಂದಿರು ಅಂದರೆ, ನನ್ನ ಪೂಜ್ಯ ತಾತಂದಿರಾದ ಪರಾಶರರು, ಬೇಡರ ಹುಡುಗಿಗೆ ಮರುಳಾಗಿ ಹೊಳೆನಡುವೆ ನಾವಿನಲ್ಲಿಯೇ ಅವಳೊಡನೆ ಕ್ರೀಡಿಸಿದರು. ಬ್ರಹ್ಮದೇವರಂತೂ ತಾವೇ ನಿರ್ಮಾಣಮಾಡಿದ ಮಗಳಿಗೆ ಮೋಹಿಸಿದರು. ಇಂತಿಂಥ ಬಲಾಢ್ಯರ ಪಾಡೇ ಹೀಗಾದಮೇಲೆ ನಿನ್ನ ಗತಿಯೇನು? ಇಂದ್ರಿಯಗಳು ಬಹಳ ಲಿಷ್ಠವಾದವುಗಳಿರುವವು. ಆದದರಿಂದ ನನ್ನ ಮಾತು ನಡಿಸು. ಮದುವೆಯನ್ನು ಮಾಡಿಕೊಳ್ಳು. ಉತ್ತಮ ಕುಲಶೀಲಸಂಪನ್ನಳಾದ ಕನ್ಯೆಯನ್ನೇ ನಿನಗೆ ಗೊತ್ತು ಮಾಡುವೆನು. ಗೃಹಸ್ಥಾಶ್ರಮಿಯಾಗಿ ಸದಾಚಾರಸಂಪನ್ನನಾಗು.

ಶುಕನು ತಂದೆಯ ಈ ಆಗ್ರಹದ ಮಾತುಗಳನ್ನು ಕೇಳಿ, ಸಂತಾಪಗೊಂಡು ಮನಸ್ಸಿನಲ್ಲಿ—"ಇವರ ಅಪ್ಪಣೆಯನ್ನು ಮೀರಿದರೆ! ಹಿರಿಯರ ಆಜ್ಞೋಲ್ಲಂಘನ ಮಾಡಿ, ಅಪಮಾನಮಾಡಿದಂತಾಗುವದು!. ಅಪ್ಪಣೆಯಂತೆ ನಡೆದರೆ ಮದುವೆಯಾಗಿ, ಮಡದಿ-ಮಕ್ಕಳ ಮೋಹದಲ್ಲಿ ಬಿದ್ದು, ಕಡೆತನಕ ಒರಲೊರಲಿ ಸಾಯಬೇಕಾಗುವದು. ಅಹಾ! ಏನುಮಾಡಲಿ? ಯಾರಿಗೆ ಹೇಳಲಿ? ತಂದೆಯನ್ನು ಅಸಂತೋಷಗೊಳಿಸುವದು ಹ್ಯಾಗೆ ವಿಹಿತವಲ್ಲವೋ, ಅದರಂತೆಯೇ ಸ್ವಂತದ|ಅಕಲ್ಯಾಣಮಾಡಿಕೊಳ್ಳುವದೂ ವಿಹಿತವಲ್ಲವು." ಹೀಗೆ ಅನೇಕ ವಿಚಾರಗಳಿಂದ ಶುಕರ ಕಣ್ಣೊಳಗಿಂದ ದುಃಖಾಶ್ರುಗಳು ಉದುರಲಾರಂಭಿಸಿದವು. ಅವರು ವಲ್ಕಲದಿಂದ ತಮ್ಮ ಕಣ್ಣೀರುಗಳನ್ನು ಒರಿಸಿಕೊಂಡು, ಸಮಾಧಾನದಿಂದ ತಂದೆಯನ್ನು ಕುರಿತು,

ಶುಕ—ಅಪ್ಪಾ, ಗೃಹಸ್ಥಾಶ್ರಮದಲ್ಲಿ ಎಳ್ಳಷ್ಟು ಸೌಖ್ಯವಿಲ್ಲ. ಆದದರಿಂದ ವಿವಾಹಿತನಾಗಲಿಕ್ಕೆ ನಾನು ಸರ್ವಥಾ ಒಪ್ಪಲಾರೆನು. ಸಾಂಸಾರಿಕರ ಮೂಲ ಧನಗಳು ಹೆಣ್ಣು-ಹೊನ್ನು-ಮಣ್ಣು. ಇವು ಮೂರರಲ್ಲಿ ಹೆಂಣು ದೊರೆದರೆ ತೀರಲಿಲ್ಲ. ಪ್ರಪಂಚಸಾಗಲಿಕ್ಕೆ ಮುಖ್ಯವಾಗಿ! ಹೊನ್ನುಬೇಕು. ಹೊನ್ನಿಗಾಗಿ ಹೆರವರಲ್ಲಿ ಬಿಕ್ಕೆಬೇಡಬೇಕು. ಧನಿಕನು ಸುಜ್ಞನಿದ್ದರೆ, ಸುಮ್ಮನೆ ತನ್ನ ಕೈಯಿಂದಾದಷ್ಟು ಭಿಕ್ಷುಕನಿಗೆ ದಾನಕೊಡುತ್ತಾನೆ. ಗರ್ವಿಷ್ಠನಿದ್ದರಂತೂ ತೀರೇಹೋಯಿತು. ಯಾಚಕನನ್ನು ಹಳಿದು, "ಬಿಕ್ಕೆಬೇಡಲಿಕ್ಕೆ ನಿನಗೇನು ಧಾಡಿಯಾಗಿದೆ; ಉದ್ಯೋಗಮಾಡಿ ಹೊಟ್ಟೆಹೊರಕೊಳ್ಳಬಾರದೇ?" ಎಂದು ಅಪಮಾನ

ಮಾಡಿಬಿಡುತ್ತಾನೆ. ಮಾನಗೇಡಿಯಾಗಿ ಬಾಳುವದಕ್ಕಿಂತ ಸಾಯುವದೇ ಸುಖ ವೆಂದು, ಯಾಚಕನು ಮನೋವ್ಯಥೆಪಡಬೇಕಾಗುತ್ತದೆ. ಪಾತ್ರಾಪಾತ್ರ ವಿಚಾ ರವು ತಪ್ಪುತ್ತದೆ. ದುಡ್ಡುಗಳಿಸಿ ಧನಿಕನಾದ ಕೂಡಲೆ ಹೊಲ-ಮನೆಗಳನ್ನು ಸಂ ಪಾದಿಸುವ ಆಶೆಯು ಹುಟ್ಟುವದು. ಈ ಹೆಂಣು-ಹೊನ್ನು-ಮಂಣುಗಳ ಸಲು ವಾಗಿ ಎಷ್ಟೆಷ್ಟೋ ಕಲಹಗಳನ್ನು ಮಾಡಬೇಕಾಗುವದು. ಇವುಗಳಿಂದ ಜೀವಕ್ಕೆ ರವಾಗುವ ಪ್ರಸಂಗಗಳೂ ಬರುವವು. ಇವೆಲ್ಲ ಕಷ್ಟಗಳಿಗೆ ಮೂಲಾಧಾರವಾದ ಲಗ್ನ ಮಾಡಿಕೊಳ್ಳುವದನ್ನೇ ಬಿಟ್ಟರೆ, ಎಲ್ಲ ತಾಪಗಳೂ ತಪ್ಪುವವು. ತಾತ್ಪ, ಈ ಸಂಸಾರವು ಬಹುಯಾತನೆಯನ್ನು ಕೊಡುವಂಥಾದ್ದು. ಇದನ್ನು ವರ್ಣಿಸುವದು ಕೂಡ ಅಸಾಧ್ಯವದೆ. ಗರ್ಭಾಶಯದಲ್ಲಿರುವಾಗ ಮಲ-ಮೂತ್ರಗಳ ಸಂದಿಯಲ್ಲಿ ಸಿಕ್ಕು ಕಷ್ಟಪಡಬೇಕಾಗುವದು, ಹುಟ್ಟುವಾಗ ದುಃಖಪಡಬೇಕಾಗುವದು; ಹುಟ್ಟಿದಮೇಲೆ ರೋಗಾದಿಗಳ ತಾಪ, ಹೊಟ್ಟೆಗಿಲ್ಲದಿದ್ದರೆ ಹೊಟ್ಟೆ ಬಟ್ಟೆಗಳಕಷ್ಟ ಮುಂದೆ ದೊಡ್ಡವನಾದಬಳಿಕ ದುಡ್ಡಿಲ್ಲದಿದ್ದರೆ ಚಿಂತೆ; ಮುಪ್ಪಿನಲ್ಲಿ ದುಃಖ, ಮರಣ ಕಾಲದಲ್ಲಿ ದುಃಖ; ಆದಿದೈವಿಕಕಷ್ಟ, ಆದಿಭೌತಿಕ ಕಷ್ಟ. ಹೀಗೆ ತಾಪಪರಂಪರೆ ಗಳನ್ನು ಈ ಸಂಸಾರದಲ್ಲಿ ಅಡಿಗಡಿಗೆ ಅನುಭವಿಸಬೇಕಾಗುವದು. ಇದಕ್ಕಾಗಿ ಯೇ ನಾನುಲಗ್ನಮಾಡಿಕೊಳ್ಳಲಿಕ್ಕೆ ಒಲ್ಲೆನೆನ್ನುವದು. ಆತ್ಮ ಹಿತವನ್ನು ಸಾಧಿಸಿ; ಕೊಳ್ಳುವದು ಪ್ರತಿಯೊಬ್ಬ ಮಾನವಪ್ರಾಣಿಯ ಕರ್ತವ್ಯವದೆ. ಈ ಪ್ರಪಂಚದಲ್ಲಿ ತೊಡಗಿದ ದಾಶರಥಿರಾಮನು ವನವಾಸದುಃಖವನ್ನು ಅನುಭವಿಸಬೇಕಾಯಿತು; ಧರ್ಮಜ್ಞಾನಿಯಾದ ಧರ್ಮರಾಜನು ಅಪ್ತರೊಡನೆ ಕಾದಬೇಕಾಯಿತು; ಹರಿಶ್ಚಂದ್ರ ನು ಹೆಂಡಿರು-ಮಕ್ಕಳನ್ನುಮಾರಿ ಹೊಲೆಯನ ಸೇವೆಗೀಡಾಗಬೇಕಾಯಿತು; ನಳ ರಾಜನು ದೇಶತ್ಯಾಗ ಮಾಡಬೇಕಾಯಿತು. ಹೀಗೆ ಪ್ರಪಂಚದ ಪ್ರಭಾವವು ವಿಚಿತ್ರ ವಾದದ್ದುಂಟು. ಶಾಬಾಸ್, ಮಾನವ ಸೃಷ್ಟಿಯವಿಲಕ್ಷಣ ಚಾಲಕವಾದ ಪ್ರಪಂ ಚವೇ, ನಿನಗೆ ದೂರಿಂದಲೇ ಸಾಷ್ಟಾಂಗ ನಮಸ್ಕಾರವು!

ಇನ್ನು ಸಂಸಾರದ ಮೂಲದ್ರವ್ಯವಾದ ಹೆಣ್ಣಿನ ವಿಷಯವಾಗಿ ವಿಚಾರಮಾಡಿ ದರಂತೂ ಮೈಮೇಲೆ ಮುಳ್ಳೇ ಏಳುವವು. ಜಿಗಳಿಯು ರಕ್ತವನ್ನು ಹೀರುವಂತೆ ಸ್ತ್ರೀಯು ಪುರುಷರ ರಕ್ತವನ್ನು ಹೀರುತ್ತಾಳೆ; ವೀರ್ಯವನ್ನೂ, ಧನವನ್ನೂ ಕ್ಷಯಿ ಸುತ್ತಾಳೆ. ಅವಳ ಮೋಹಕ ಚೇಷ್ಟೆಗಳಿಗೆ ಮರುಳಾಗಿ ಮೂರ್ಖರು ಅವಳ ಬೆನ್ನು ಹತ್ತುತ್ತಾರೆ; ಕುಟಿಲ ಭಾಷಣಗಳಿಗೆ ಬೆಪ್ಪಾಗಿ ಅವಳು ಹೇಳಿದಂತೆ ಕೇಳುತ್ತಾರೆ. ಒಯ್ಯಾರ-ಒನಪುಗಳಿಗೆ ಬಳಬಿದ್ದು ಒಡಗೂಡುತ್ತಾರೆ; ಅವಳ ಬಣ್ಣದಮಾತು ಗಳಿಗೆ ಬಲಿಬಿದ್ದು ಬಂಧು-ಬಳಗದವರನ್ನು ಬಿಡುತ್ತಾರೆ; ವಸ್ತ್ರ-ಒಡವೆಗಳ

ಭರಕ್ಕೆ ಬಿದ್ದು ಧನದಾಶೆಯಿಂದ ದುಷ್ಕೃತ್ಯಗಳಿಗೀಡಾಗುತ್ತಾರೆ. ಇಂಥ ನೀಚ ಪ್ರಾಣಿಯ ಹಂಬಲಕ್ಕೆ ಹೊರತಾಗಿ ಯಾವ ಪುರುಷರಿರುವರೋ ಅವರೇ ಧನ್ಯರು!

ವ್ಯಾಸ—ಮಗುವೇ, ದುಡ್ಡಿಗಾಗಿ ನೀನು ಇಷ್ಟು ದುಃಖಿಸುವ ಅಗತ್ಯವಿಲ್ಲ. ಜನಕಾದಿಗಳಂಥ ಪುಣ್ಯಶಾಲಿ ಸಾರ್ವಭೌಮರು ನಿಮ್ಮಂಥ ಸಚ್ಛೀಲವಿಪ್ರೋತ್ತಮರಿಗೆ ದ್ರವ್ಯದಾನಕೊಡಲು ಕೈಕಟ್ಟಿನಿಂತಿರುವರು; ಆಶ್ರಮಪದವನ್ನು ನಿಷ್ಕಂಟಕದಿಂದ ಸಾಗಿಸುವದಕ್ಕೆ ಸಿದ್ಧರಾಗಿರುವರು. ಪ್ರಪಂಚದಲ್ಲಿ ಅನೇಕ ದುಃಖಗಳಿರುವವೆಂದು ಹೇಳುವೆಯಲ್ಲವೆ? ಆದರೆ ಪ್ರಪಂಚಕ್ಕೆ ತಕ್ಕ ಅನೇಕ ಸಾಧನಗಳನ್ನು ಈ ಸೃಷ್ಟಿಯಲ್ಲಿ ದೇವರು ಯಾಕೆ ನಿರ್ಮಿಸಿದನು? ಕಣ್ಣಿಗೆ ಕಾಣುವ ಅನೇಕ ಸಂಸಾರಸಾಧನಗಳ ವಿಚಾರಮಾಡಿದರೆ, ಸಂಸಾರಮಾಡಬೇಕಂತಲೇ ಪರಮೇಶ್ವರನ ಸಂಕೇತವಿದ್ದಂತೆ ಕಾಣುತ್ತದೆ. ಪರಮೇಶ್ವರನ ಇಚ್ಛೆಯನ್ನು ಬದಿಗೊತ್ತಿ ಬಾಳುವದರಲ್ಲಿ ಪುರುಷಾರ್ಥವೇನು? ಪ್ರಪಂಚಸಾಹಿತ್ಯಗಳನ್ನು ಶಾಸ್ತ್ರಪೂತ ಯಥಾಯೋಗ್ಯ ರೀತಿಯಿಂದ ಉಪಯೋಗಮಾಡಿಕೊಂಡರೆ, ಆತನಿಗೆ ಆನಂದವಾಗದೆ ಇರದು. ಮನುಷ್ಯನ ಸುಸ್ಥಿತಿಗೆ ಸಂಸಾರವೇ ಮೂಲಕಾರಣವಾಗಿದೆಯೆನ್ನಲು ಅಡ್ಡಿ ತೋರುವದಿಲ್ಲ; ಪ್ರಪಂಚವಿಲ್ಲದಿದ್ದರೆ ಎಲ್ಲ ಉದ್ಯೋಗಗಳು ಇಲ್ಲದಂತಾಗುವವು; ಎಲ್ಲ ಕಲೆಗಳು ನಿರ್ನಾಮವಾಗುವವು; ಹೆರವರ ಹಿತವನ್ನೂ ಪರೋಪಕಾರವನ್ನೂ ಮಾಡಬೇಕೆಂದು ಪರಮೇಶ್ವರನು ನಮಗೆ ದಯಪಾಲಿಸಿದ ಸಾಮರ್ಥ್ಯವನ್ನು ಉಪಯೋಗಿಸಲಿಕ್ಕೆ ಸ್ಥಳವೇ ಉಳಿಯುತ್ತಿದ್ದಿಲ್ಲ. ಕಿಂಬಹುನಾ ಮನುಷ್ಯನ ಮನುಷ್ಯತ್ವವೇ ಕಡಿಮೆಯಾಗುತ್ತಿತ್ತು. ಅಥವಾ ತೀರ ನಷ್ಟವಾಗಿ ಹೋಗುತ್ತಿತ್ತು! ಪ್ರಪಂಚದಲ್ಲಿದ್ದು ಪರಮಾರ್ಥವೈರಾಗ್ಯ ಧರಿಸಿ ಕಾಲಕ್ಷೇಪ ಮಾಡುವದೇ ಮನುಷ್ಯನಿಗೆ ರಾಜಮಾರ್ಗವಾಗಿದೆ. ಪರೋಪಕಾರಕ್ಕಾಗಿ ಕೈಕಾಲು ಮುಂತಾದ ಅವಯವಗಳನ್ನು ದೇವರು ನಮಗೆ ಕೊಟ್ಟಿರಲು, ದುಃಖಕ್ಕೆ ಬೆದರಿ, ಹೆಂಡಿರು ಮಕ್ಕಳನ್ನು ಬಿಟ್ಟುಕೊಟ್ಟು, ಉದ್ಯೋಗ ಹೀನನಾಗಿ ಮೈಗೆ ಬೂದಿಬಡಕೊಂಡು, ಕೌಪೀನ ಹಾಕಿಕೊಂಡು ಬಂದು ಗುಹೆಯಲ್ಲಿ ಹೋಗಿ ಕುಳಿತುಕೊಳ್ಳುವದೂ, ನಿರರ್ಥಕವಾಗಿ ಕಡೆಗೊಂದು ದಿನ ಸತ್ತುಹೋಗುವದೂ ಪರಮೇಶ್ವರನಿಗೆ ಎಷ್ಟರಮಟ್ಟಿಗೆ ಮಾನ್ಯವಾದೀತೆಂಬದನ್ನು ನೀನೇ ತಿಳಿದುನೋಡು. ಯಾಕಂದರೆ ತಾನೊಬ್ಬನೇ ದೇವರನ್ನು ಸೇರಬೇಕು; ತನ್ನನ್ನು ಬೆನ್ನುಹತ್ತಿ ಬಂದ ಹೆಂಡಿರು-ಮಕ್ಕಳು, ತಂದೆ-ತಾಯಿಗಳು ಮುಂತಾದ ತನ್ನವರು ಇಲ್ಲಿಯೇ ಗೋಳಾಡಬೇಕು. ಇಂಥ ಅಧಮಾಧಮಬುದ್ಧಿಯುಳ್ಳ ವೈರಾಗ್ಯಶೀಲರಿಗೆ, ಯಾವ ಪದವು ದೊರೆಯುವದೋ ನಾನಂತು ಹೇಳಲಾರೆ. ಹೆಂಡಿರ-ಮಕ್ಕಳು ಮೊದಲಾದವರೆಲ್ಲರಿಗೂ ಅಂಥ ಮಾರ್ಗವನ್ನು ಹೇಳಿ

ಕೊಟ್ಟು-ಒಡಂಬಡಿಸಿ, ಅವರ ಒಪ್ಪಿಗೆಯಿಂದ ನೀನು ಬೈರಾಗಿಯಾಗಿ ಹೋದರೆ ನಿನಗೆ ಯಾರು ಬೇಡೆನ್ನುವರು? ಯಾರು ಹೆಸರಿಡುವರು? ಅದಕ್ಕಾಗಿಯೇ ಮೊದಲು ನೀನು ಗೃಹಸ್ಥಾಶ್ರಮಿಯಾಗೆಂದು ಅನ್ನುತ್ತೇನೆ.

ಶುಕ—ಅಪ್ಪಾ, ತಾವು ಪರಾಶರಪುತ್ರರು, ಮಹಾ ಭಾಗ್ಯಶಾಲಿಗಳು, ವೇದಾಂತಧುರೀಣರು. ಹೀಗಿದ್ದು ಪ್ರತ್ಯಕ್ಷ ಹೊಟ್ಟೆಯುಮುಗುವಿನ ಕಳಕಳಿಯಿಲ್ಲದೆ ಸುಳ್ಳು ಸುಖವೆಂಬ ಹಾಳು ಬಾವಿಯಲ್ಲಿ ನನ್ನನ್ನು ಯಾಕೆ ದೂಡುವಿರಿ! "ಪರೋಪದೇಶೇ ಪಾಂಡಿತ್ಯಃ" (ಹೆರವರಿಗೆ ಉಪದೇಶಮಾಡುವದರಲ್ಲಿ ಮಾತ್ರ ಕುಶಲತನವು) ಎಂಬದನ್ನು ಸಿದ್ಧಮಾಡಿಕೊಡುವದಕ್ಕಾಗಿಯೇ ನೀವು ಹೀಗೆ ಮಾತಾಡುವಿರೊ, ನನ್ನ ಸತ್ವ ಪರೀಕ್ಷೆ ಮಾಡುವಿರೋ! ಅಥವಾ ಕಲಿಯುಗದಲ್ಲಿ 'ಕುಶಲಾಬ್ರಹ್ಮವಾರ್ತಾಯಾಂ' ಎಂದು ತಾವು ಬರೆದ ಭವಿಷ್ಯ ವಚನವನ್ನು ಸ್ವಂತ ಉದಾಹರಣೆಯಿಂದ ಸಿದ್ಧಮಾಡಿ ತೋರಿಸುವಿರೋ? ನನಗಂತೂ ಏನೂ ತೋಚಲೊಲ್ಲದು. ಪ್ರಾಜ್ಞರಾದ ತಮ್ಮ ಸಮ್ಮುಖದಲ್ಲಿ ಈ ಪಾಮರಪುತ್ರನು ಏನು ಹೇಳಬೇಕು? ಮಲಗಿದವರನ್ನು ಎಬ್ಬಿಸುವದು ಸಹಜವು; ಎಚ್ಚರಿದ್ದವರನ್ನು ಎಬ್ಬಿಸುವದು ಹ್ಯಾಗೆ ತಾನೆ ಸಾಧ್ಯವು? ತಾತರೇ, "ಸರ್ವೇವಯಮತಃಪರಂ" (ನಾವೆಲ್ಲರೂ ಈ ಸ್ಥೂಲದಾಚೆಯಲ್ಲಿರುವೆವು.) ಎಂಬ ಸಿದ್ಧಾಂತ ವಾಕ್ಯವು ತಮಗೆ ಗೊತ್ತಿಲ್ಲವಂತಲ್ಲ. ಈ ವಾಕ್ಯದಿಂದ ತಂದೆಗೆ ಮಗನು ಯಾರು, ಮಗನಿಗೆ ತಂದೆ ಯಾರು, ಎಂಬದು ಸಿದ್ಧವಾಗುವದಲ್ಲವೆ? ಈಗಂತೂ ನಾನು ನಿಮ್ಮ ಮಗನಿದ್ದೇನೆ. ಪೂರ್ವ ಜನ್ಮಗಳಲ್ಲಿ ಯಾರಯಾರಿಗೆನಾನುಮಗನಾಗಿದ್ದೆನು? ಹಿರಿಯರ ಮಾತು ಕೇಳದೆ ನಿಮಗೆ ದುಃಖಕೊಡುವಂತೆ, ಹಿಂದೆ ಎಷ್ಟುಮಂದಿ ತಾಯಿ-ತಂದೆಗಳಿಗೆ ದುಃಖಕೊಟ್ಟಿರಬಹುದು? ಶಿವ ಶಿವಾ! ಮುಂದೆ ಯಾರಯಾರಿಗೆ ದುಃಖಕೊಡುವೆನೋ ದೇವರೇ ಬಲ್ಲ. ಪೂಜ್ಯರೇ, ಯದೃಚ್ಛೆಯಿಂದ ಯಾವಾಗಲೋ ನಿರ್ಮಾಣವಾಗುವಂಥ ಕೊನೆಗೊಂದಿಲ್ಲೊಂದು ದಿನ ನಾಶವಾಗುವಂಥ ಪದಾರ್ಥಗಳ ಸಂಬಂಧವು ಅನಿತ್ಯಸಂಬಂಧವಲ್ಲದೆ ಮತ್ತೇನು? ಈ ವೇದಾಂತ ಶ್ರವಣವು ಒತ್ತಟ್ಟಿಗಿರಲಿ. ಲೋಕದಲ್ಲಿಯಾದರೂ ಮಗನಿಂದ ತಂದೆಗೆ ಯಾವ ಸುಖವುಂಟು? ಹಸಿವೆ ಆದರೆ, ಅನ್ನ ಉಣ್ಣದೆ ಮಗನ ಮೋರೆಯನ್ನು ಮಿಕಿ ಮಿಕಿ ನೋಡುತ್ತ ಕುಳಿತರೆ ಹೊಟ್ಟೆತುಂಬುವದೋ? ನೀರಡಿಕೆಯಾದರೆ, ನೀರು ಕುಡಿಯದೆ ಮಗನನ್ನು ಅಪ್ಪಿಕೊಂಡರೆತೃಷೆಯು ಶಾಂತವಾಗುವದೋ? ಇದೇಮೇರೆಗೆ ಮೂಗಿಗೆ ಸುವಾಸನೆ ಬೇಕಾದರೆ ಸುವಾಸನೆಯ ಪದಾರ್ಥಗಳು ಪ್ರತ್ಯಕ್ಷ ಬೇಕಲ್ಲವೇ? ಕಿವಿಗೆ ಸುಖವಾಗಬೇಕಾದರೆ ಮಧುರನಾದಗಳು ಹತ್ತರಿರಬೇಕಲ್ಲವೇ? ಸ್ತ್ರೀಸುಖವು ಸ್ತ್ರೀಯರಿಂದಲೇ ದೊರೆಯು

ಬೇಕಲ್ಲವೆ? ಹೀಗೆ ಯಾವ ಮಾತಿನಿಂದ ನೋಡಿದರೂ ತಂದೆಗೆ ಮಗನಿಂದಾಗುವ ಪ್ರಯೋಜನವೇನು? ನನ್ನ ಸಲುವಾಗಿ ತಾವು ಇಷ್ಟೇಕೆ ದುಃಖಪಡುವಿರಿ? ಅಜೀಗರ್ತನು ತನ್ನ ಮಗನನ್ನು ಹರಿಶ್ಚಂದ್ರನಿಗೆ ಹಣದಾಶೆಯಿಂದ ಮಾರಲಿಲ್ಲವೇ? ಹರಿಶ್ಚಂದ್ರನು ಮುಂದೆ ಆ ಬಾಲಕನನ್ನು ಬಲಿಕೊಡಲು ಯಜ್ಞಸ್ತಂಭಕ್ಕಾಗಿ ಕಟ್ಟಲಿಲ್ಲವೇ? ಇದೆಲ್ಲ ತಮಗೆ ಗೊತ್ತಿದದ್ದೇ ಉಂಟು. ಯಾರಿಗೆಯಾರುಪ್ರಿಯರು? ತಂದೆಗೆ ಮಗನು ಪ್ರಿಯನಾಗಿದ್ದರೆ, ಅಜೀಗರ್ತನು ಮಗನನ್ನು ದ್ರವ್ಯಮೋಹದಿಂದ ಮಾರುತ್ತಿದ್ದನೇ? ಪ್ರಸಂಗ ಬಂದರೆ ಯಾರಿಗೆ ಯಾರೂ ಆಗುವದಿಲ್ಲ. ಆದದರಿಂದ ನನ್ನ ಮೇಲಿನ ಮೋಹವನ್ನು ಬಿಡಿರಿ. ವಿವಾಹಿತನಾಗಲಿಕ್ಕೆ ನನಗೆ ತೊಂದರೆಯನ್ನು ಕೊಡಬೇಡಿರಿ. ಬ್ರಾಹ್ಮಣಜನ್ಮಕ್ಕೆ ಬಂದು, ಈ ಉತ್ತಮೋತ್ತಮವಾದ ಜನ್ಮದ ಸಾರ್ಥಕ ಮಾಡಿಕೊಳ್ಳದಿದ್ದರೆ, ಇನ್ನಾವ ಜನ್ಮದಲ್ಲಿ ಗತಿಗಾಣಬೇಕು? ಅಪ್ಪಾ, ನಾನು ಬಹಳ ವಿಚಾರಮಾಡಿದೆನು. ಪರಿಪರಿಯಾಗಿ ನನ್ನ ಮನಸ್ಸಿಗೆ ಹೇಳಿಕೊಂಡು ನೋಡಿದೆನು. ಹಿರಿಯರ-ಜನ್ಮದಾತರ ಮಾತು ಮೀರುವದು ಮನಸ್ಸೇ, ನಿನಗೆ ತಕ್ಕದ್ದಲ್ಲ, ಅದರಲ್ಲಿ ಕಲ್ಯಾಣವಿಲ್ಲ, ಎಂದು ಎಷ್ಟು ಬಗೆಯಿಂದ ಅದಕ್ಕೆ ಕೈಮುಗಿದು-ಕಾಲುಬಿದ್ದು ಹೇಳಿಕೊಂಡೆನು; ಆದರೆ ಅದೆಲ್ಲ ನಿರರ್ಥಕವಾಯಿತು. ಉಪಾಯವಿಲ್ಲ. ಸಂಸಾರಮಾಡಬೇಕೆಂಬ ವಾಸನೆಯೇ ನನ್ನಲ್ಲಿ ಹುಟ್ಟಲೊಲ್ಲದು. ತಾತಾ, ನನ್ನನ್ನು ತಾರಿಸು! ನೀನು ನಾರಾಯಣಸ್ವರೂಪನು, ಇಲ್ಲವೆ ನಾರಾಯಣಾಂಶಸಂಭೂತನು; ಎಲ್ಲವನ್ನೂ ಬಲ್ಲವನು; ನನ್ನನ್ನು ರಕ್ಷಿಸು!

ವ್ಯಾಸ (ಮಗನ ಕಳವಳಿಯ ಮಾತುಗಳನ್ನು ಕೇಳಿ ಮನಸ್ಸು ಕರಗಿ, ಅವನನ್ನು ಹತ್ತರಕರಕೊಂಡು ಬೆನ್ನಮೇಲೆ ಕೈಯಾಡಿಸಿ, )—ಬಾಳಾ, 'ನಿನ್ನ ಅಕಲ್ಯಾಣವಾಗಬೇಕು, ನಿನ್ನ ನಾಶವಾಗಬೇಕು, ನಿನಗೆ ಅಧೋಗತಿಯಾಗಬೇಕು, ಹೀಗೆ ಎಂದಾದರೂ ನಾನು ಅಪೇಕ್ಷಿಸುತ್ತಿದ್ದೇನೇನು? ಈ ಜಗತ್ತಿನೊಳಗಿನ ಯಾವ ತಂದೆಯು, ಯಾವ ತಾಯಿಯು ಮಗನ ಅಕಲ್ಯಾಣಕ್ಕಾಗಿ ಬಯಸಿಯಾರು? ಹಾಗೆ ಬಯಸುವದು ಶಕ್ಯವಾದರೂ ಇರುವದೋ! ಪುತ್ರಪ್ರೇಮವು ಹ್ಯಾಗಿರುತ್ತದೆಂಬದರ ಅನುಭವವೇ ನಿನಗಿಲ್ಲ. ನಾನು ಏನುಹೇಳಲಿ? "ಪ್ರಸಂಗಬರುವ ವರೆಗೆ ಎಲ್ಲರೂ ಎಲ್ಲರಿಗೆ ಪ್ರಿಯಕರರು. ಮುಂದೆ ಯಾರಿಗೆ ಯಾರೋ ಪುರಂಧರ ವಿಠ್ಠಲ," ಎಂದು ಹೇಳಿದೆಯಲ್ಲ? ಇದು ಶಾಸ್ತ್ರೀಯ ದೃಷ್ಟಿಯಿಂದ ನಿಜವಿದ್ದರೂ ವ್ಯಾವಹಾರಿಕ ದೃಷ್ಟಿಯಿಂದ ಖಂಡಿತವಾಗಿ ಸಟೆಯಾಗಿರುವದು. ಮಗುವೇ, ಸಾಂಸಾರಿಕರಿಗೆ ಪ್ರೇಮವೆಂಬುವದೇ ಮುಖ್ಯ ಬಂಡವಲವು. ಸ್ತ್ರೀಪ್ರೇಮ, ಪುತ್ರಪ್ರೇಮ, ಪಿತೃಪ್ರೇಮ, ಬಂಧುಪ್ರೇಮ ಇತ್ಯಾದಿ ಪ್ರೇಮಮಾಲಿಕೆಯು ಹರಿದುಹೋದ ಬಳಿಕ

ಮುಂದೇನು! ಅಂಥವನು ಇದ್ದರೂ ಅಷ್ಟೇ, ಸತ್ತರೂ ಅಷ್ಟೇ. ಎಳೆಯಲ್ಲಿ ಪೋಣಿಸಿದ ಮುತ್ತಿನ ಮಾಲೆಯಿಂದ ಕಂಠಕ್ಕೆ ದಿವ್ಯಾಲಂಕಾರವಾಗುವಂತೆ, ಸ್ತ್ರೀಪ್ರೇಮಾದಿ ಮೌಕ್ತಿಕಗಳಿಂದಲೇ ಈ ಸಂಸಾರಕ್ಕೆ ಗೌರವವು ಬಂದಿರುತ್ತದೆ. ಅದೇ ಮುತ್ತಿನ ಮಾಲೆಯು, ಎಳೆಹರಿದು ಹೋದಬಳಿಕ ಎತ್ತೆತ್ತೋ ಬಿದ್ದು ಬಿಡಿಗಾಳುಗಳಾಗಿ ನಾಶವಾಗುವಂತೆ, ಪ್ರೇಮ ತಪ್ಪಿದ ಪ್ರಾಪಂಚಿಕನ ಗತಿಯೂ ಹಾಗೆಯೇ ಆಗುತ್ತದೆ. ಎಲೈ ಬಾಲಕಾ, ವ್ಯವಹಾರಿಕ ಪದಾರ್ಥಗಳಮೇಲೆಯೇ ಪ್ರೇಮವಿಡಲಾರದವನು, ಅವ್ಯವಹಾರಿಕ (ಪಾರಮಾರ್ಥಿಕ) ವಸ್ತುಗಳಮೇಲೆ ಹ್ಯಾಗೆ ಪ್ರೇಮವಿಟ್ಟಾನು! ತನ್ನ ಸ್ವಕೀಯ ದೇಹದಿಂದಲೇ ನಿರ್ಮಾಣವಾದ ಆಕಾರವನ್ನು (ಮಕ್ಕಳನ್ನು) ಕಂಡು ಯಾವನ ಮನಸ್ಸು ಕರಗಿ ಪ್ರೇಮಪೂರ್ಣವಾಗುವದಿಲ್ಲವೋ, ಅಂಥವನು ಗುಹೆಯಲ್ಲಿ ಗುಪ್ತವಾಗಿದ್ದ ನಿರಾಕಾರ ವಸ್ತುವನ್ನು ನೋಡಿ ಹೇಗೆ ಸದ್ಗದಿತನಾದಾನು? ಛೇ! ಎಂದೆಂದಿಗೂ ಆಗಲಾರನು. ಅಂತೇ ಜಗತ್ತಿನಲ್ಲಿ ನಿಜವೇದಾಂತಿಗಳ ಸಂಖ್ಯೆಯು ಕೈಬೆರಳಿನಷ್ಟು ಕೂಡ ಇಲ್ಲ; ಪ್ರಾಪಂಚಿಕರೇ ತುಂಬಿ ತುಳುಕುತ್ತಾರೆ. ಸಂಸಾರವು ಪ್ರೇಮವನ್ನು ಕಂಡುಹಿಡಿಯುವ ಪಾಠಶಾಲೆಯಾಗಿರುತ್ತದೆ. ಪಾರಮಾರ್ಥಿಕವನ್ನು ಪ್ರಾರಂಭಿಸುವ ಧೂಳಾಕ್ಷರವಾಗಿರುತ್ತದೆ. ಸ್ವಾದ ನೋಡದೆ, ಅಥವಾ ಸ್ವಾದದಿಂದ ತೃಪ್ತಿಯಾಗದೆ, ಮನಸ್ಸು ಎಂದಿಗೂ ಬೇಸರಾಗಲಾರದು. ಬೇಸರಬರುವವರೆಗೆ ಪ್ರಪಂಚಕ್ಕೆ ಬಂದಿರುವ ಗೌರವವು 'ಪ್ರೇಮ' ಎಂಬ ಒಂದೇ ಶಬ್ದದಲ್ಲಿ ಸಂಪೂರ್ಣವಾಗಿ ಒಟ್ಟುಗೂಡುವದು. ಏನೂ ಅರಿಯದೆ ಎಲ್ಲದಕ್ಕೂ ಹೆಸರಿಡುವದು ನಿನ್ನಂಥ ಹುಡುಗರಿಗೆ ಮಾತ್ರ ಶೋಭಿಸುವದಲ್ಲದೆ, ಉಳಿದವರಿಗೆ ಒಪ್ಪಲಾರದು. ಬರಿಯ ಓದಿನಿಂದ-ಗಿಳಿಪಾಠದಿಂದ ಏನೂ ಪ್ರಯೋಜನವಿಲ್ಲ. ನೀನು ಇನ್ನು ಅಜ್ಞಸ್ಥಿತಿಯಲ್ಲಿರುವರಿಂದ ಸಂಸಾರದ ವಿಷಯವಾಗಿ ಹೀಗೆ ವಿರುದ್ಧ ಭಾವನೆಯುಳ್ಳವನಾಗಿರುತ್ತೀ. ಸಂಸಾರಮಾಡುವ ಸದ್ಗೃಹಸ್ಥನ ದೊಡ್ಡಸ್ತಿಕೆಯನ್ನೂ, ಆ ಆಶ್ರಮದ ಗೌರವವನ್ನೂ ಎಷ್ಟು ಹೇಳಿದರೂ ತೀರದು.

ಈ ನಿನ್ನ ವಿಪರೀತ ಭಾವನೆಯು ದೂರವಾಗಬೇಕಾದರೆ ನಾನು ಈಗೀಗ ಬರೆದ ಭಾಗವತವನ್ನು ಓದಿಕೊಳ್ಳು. ಅದು ಭಾರತದಂತೆ ಅಷ್ಟೇನು ದೊಡ್ಡದಿಲ್ಲ. ಹನ್ನೆರಡು ಸ್ಕಂಧವುಳ್ಳದ್ದಿರುತ್ತದೆ. ಅದರಲ್ಲಿ ಪಾರಮಾರ್ಥಿಕ, ಧಾರ್ಮಿಕ, ಸಾಮಾಜಿಕ, ನೈತಿಕ ವಿಷಯಗಳು ಅಲ್ಲಲ್ಲಿಗೆ ತುಂಬಿರುವವು. ಭಾಗವತವು ಸಕಲ ಪುರಾಣಗಳ ಲಲಾಮಭೂತವಾಗಿರುವದು. ಶ್ರೀಮನ್ನಾರಾಯಣನ ಅಗಾಧ-ಅನಂತ ಲೀಲಾ-ವಿನೋದಗಳು ಸಾರಭೂತವಾಗಿ ಅದರಲ್ಲಿ ಸಂಗ್ರಹಿಸಲ್ಪಟ್ಟಿರುವದರಿಂದ, ಓದುವದಕ್ಕೆ ಅದು ಆನಂದದಾಯಕವಾಗಿರುವದು. ನಾರದ ಮಹರ್ಷಿಗಳು

ಪಾಮರರಾದ ಭೂಲೋಕವಾಸಿಗಳ ಉದ್ಧಾರವಾಗಬೇಕೆಂದು ಬ್ರಹ್ಮದೇವರಿಂದಲೂ, ಬ್ರಹ್ಮದೇವರು ಶ್ರೀ ಮಹಾವಿಷ್ಣುವಿನಿಂದಲೂ, ಸಂಗ್ರಹಿಸಿದ ಅತ್ಯುತ್ತಮ ಗ್ರಂಥವು ಇದೊಂದೇ ಸರಿ. ನಾನು ಆ ಮಹರ್ಷಿಗಳ ಕೃಪಾಸಂಪಾದನದಿಂದ ಮಹಾಭಾಗವತವನ್ನು ಉಪದೇಶಿಸಿಕೊಂಡು, ಸಕಲರಿಗೂ ತಿಳಿಯುವಂತೆ ಸುಲಭ ಶೈಲಿಯಿಂದ ಬರೆದಿರುತ್ತೇನೆ. ಈ ಗ್ರಂಥವು ಸಕಲ ಬ್ರಹ್ಮವಿದ್ಯೆಯ ನಿಧಾನವಿರುತ್ತದೆಂತಲೇ ಹೇಳಬೇಕು. ಪ್ರವೃತ್ತಿ-ನಿವೃತ್ತಿಗಳ ಲಕ್ಷಣಗಳನ್ನೇ ಆಖ್ಯಾಯಿಕೆಯ ರೂಪದಿಂದ ಇದರಲ್ಲಿ ಜಗತ್ತಿನಮುಂದಿಟ್ಟಿದ್ದೇನೆ. ಕೇವಲ ಕಥಾಸಂದರ್ಭದಕಡೆಗೆ ಮನವಿಡದೆ ಅದರೊಳಗಿನ ಸಾರಭೂತವಾದ ತತ್ವಗಳನ್ನು ಲಕ್ಷಿಸಿ ಅದನ್ನು ಪಠಣ ಮಾಡು.ಅಂದರೆ ನಿನ್ನ ಮನಸ್ಸಿನ ವಿಕಲ್ಪಗಳೆಲ್ಲ ಸೂರ್ಯಪ್ರಕಾಶದಿಂದ ಕಗ್ಗತ್ತಲೆಯು ಹರಿದುಹೋಗುವಂತೆ, ನಿರ್ನಾಮವಾಗಿ ಹೋಗುವವು; ಮನಸ್ಸಿಗೆ ಅಸದೃಶಸಮಾಧಾನವಾಗುವದು. ಲೋಮಹರ್ಷಣನ ಮಗನೂ ನನ್ನ ಪ್ರಿಯಶಿಷ್ಯನೂ ಆದ ಸೂತನನ್ನು ಕೂಡಿಕೊಂಡು ಈ ಭಾಗವತವನ್ನು ಶ್ರವಣಮಾಡು.

ಹೀಗೆಕಂದೆಯು ಅಂತಃಕರಣದಿಂದ ಹೇಳಿದ ಮಾತುಗಳನ್ನು ಶುಕನು ಕೇಳಿಸಂತೋಷಗೊಂಡು, ಸೂತನೊಡನೆ ಪಿತೃಮುಖದಿಂದ ಕೆಲದಿನ ಸಮಗ್ರ ಭಾಗವತವನ್ನು ಸಾಂಗೋಪಾಂಗವಾಗಿ ಶ್ರವಣಮಾಡಿದನು. ಭಾಗವತದೊಳಗಿನ ಶ್ರೀಕೃಷ್ಣಜನನ, ಪೂತನಾ ಹನನ, ಕಂಸಮರಣ, ಕೌರವನಾಶನ, ಪಾಂಡವರಕ್ಷಣ, ಗೋವರ್ಧನೋದ್ಧಾರಣ ಮುಂತಾದ ಹರಿಲೀಲೆಯ ಅಸಂಖ್ಯ ರಮಣೀಯ ಪ್ರಸಂಗಗಳು ಶುಕ-ಸೂತರನ್ನು ಆನಂದಸಾಗರದಲ್ಲಿ ಮುಳುಗಿಸಿದವು. ಓಲೆಯಲ್ಲಿ ಕುಂದಣದಿಂದ ವಜ್ರಗಳು ಒಪ್ಪುವಂತೆ, ಆಖ್ಯಾನದಲ್ಲಿ ಅಡಿಗಡಿಗೆ ಸೇರಿದ ವೇದಾರ್ಥಗಳು ಶೋಭಿಸುತ್ತಿರುವವು; ಮೂರ್ತಿಗಳಿಗೆ ಒಪ್ಪಕೊಟ್ಟಂತೆ ಅನೇಕ ನವರಸಯುಕ್ತವಾದ ಸೃಷ್ಟಿಸೌಂದರ್ಯಾದಿ ವರ್ಣನಗಳು ವಾಚಕರನ್ನು ಸೋಜಿಗಗೊಳಿಸುತ್ತಿರುವವು; ರುಚಿಕರವಾದ ಊಟದಲ್ಲಿ ವ್ಯಂಜನ ಪದಾರ್ಥಗಳಿಂದ ಬರುವ ಸವಿಯು, ಪ್ರಸಂಗ ವಿಶೇಷದಲ್ಲಿ ಅದರೊಳಗೆ ಜಡಕವಾದ ನೈತಿಕ ಸಂಗತಿಗಳಿಂದ ತೃಪ್ತಿಯಾಗುತ್ತಿರುವದು; ಅಂಬರೀಷ, ರುಕ್ಮಾಂಗದ, ರಂತಿದೇವ ಮುಂತಾದ ಭಗವದ್ಭಕ್ತರ ಚರಿತ್ರೆಗಳು ಶ್ರೋತೃವನ್ನು ಮಿಷ್ಟಾನ್ನವನ್ನುಂಡಂತೆ ತೃಪ್ತಿಕರವಾಗಿ ಮಾಡುತ್ತಿರುವವು. ಸಾರಾಂಶ, ಸಕಲ ಪುರಾಣಗಳನ್ನು ಒಂದು ಪರಡಿಯಲ್ಲಿಯೂ ಭಾಗವತಪುರಾಣವನ್ನೊಂದನ್ನೇ ಮತ್ತೊಂದು ಪರಡಿಯಲ್ಲಿಯೂ ಹಾಕಿತೂಗಿದರೆ, ಭಾಗವತದ ತೂಕವೇ ಮಿಗಿಲಾಗುವದು. ಉಳಿದ ಕಥಾಕಾದಂಬರಿಗಳಂತು ಅದರ ಪಾಸಂಗಕ್ಕೆಹತ್ತಲಾರವು. ಇಂಥ ಅಪೂರ್ವಗ್ರಂಥವು ಶುಕರನ್ನು ಸಮಾಧಾನಗೊಳಿ

ಸಿದ್ದು ಅರಿದಲ್ಲ. ಆದರೂ ಅದರಲ್ಲಿಯು ಅನೇಕ ವಿಷಯುಗಳು ಶುಕರನ್ನು ಸಂಶಯುದಲ್ಲಿ ಕೆಡವಿದವು. ಮೊದಲೆ ಖಿನ್ನವಾದ ಅವರ ಮನಸ್ಸು, ಅದರಿಂದ ಮತ್ತಿಷ್ಟು ಉದಾಸವಾಗಹತ್ತಿ,ವ್ಯಾಸರಅಪ್ಪಣೆಯುಂತೆಗೃಹಸಾಶ್ರಮಿಯಾಗಲಿಕ್ಕೆಆಶುಕರುಒಪ್ಪಲಿಲ್ಲ. ಅದನ್ನು ವ್ಯಾಸರು ತಿಳಿದು,

ವ್ಯಾಸ—ತಮ್ಮ, ಶುಕಾ, ಉದಾಸಮನಸ್ಕನಾಗುವ ಪ್ರಸಂಗವು ಈಗ ಏನು ಒಂದಿರುವದು? ನನ್ನಂಥ ತಂದೆಯು ನಿನಗಿರುತ್ತಿರಲ, ನೀನು ನಿರರ್ಥಕವಾಗಿ ಚಿಂತಾತುರನಾಗಬೇಕೆ? ನಾನು ಹೇಳಿದಂತೆಕೇಳಿದರೆ ನಿನ್ನ ಕಲ್ಯಾಣವಾಗದೆಇರದು. ಸುಮ್ಮನೆ ದೇಹವನ್ನೂ ಮನಸ್ಸನ್ನೂ ಕೊರಗಿಸುವದರಲ್ಲಿ ಅರ್ಥವೇನು? ಅನುಭವವು ಸರ್ವಪ್ರಮಾಣಗಳಲ್ಲಿ ಹೆಚ್ಚಿನದು. ಅದನ್ನು ದೊರಕಿಸುವ ಪ್ರಯತ್ನಮಾಡು. ಅಂದರೆ ನಿನಗೆ ಸಮಾಧಾನವಾದೀತು. ಮೊದಲು ನೀನು ಮಿಥಿಲಾನಗರಿಗೆ ಹೋಗು. ಅಲ್ಲಿ ಜನಕನೆಂಬ ರಾಜನು ರಾಜ್ಯವನ್ನು ಆಳುತ್ತಿರುವನು. ಆ ಮಹಾತ್ಮನು ವಿದೇಹನೂ ಮುಕ್ತನೂ ಇರುತ್ತಾನೆ. ಅಂಥ ಧಾರ್ಮಿಕ ಅರಸನು ಈಗಿನ ಕಾಲಕ್ಕೆ ಭೂವಲಯುದಲ್ಲಿ ಯಾರೂಇಲ್ಲ. ಅವನು ಆತ್ಮಪೂರ್ಣನಾದುದರಿಂದ ನಿನ್ನ ಸಂಶಯುಗಳನ್ನೆಲ್ಲ ಉಚ್ಛೇದ ಮಾಡುವನು. ಕಾಲಹರಣಮಾಡಬೇಡ. ಹೆಚ್ಚಿಗೇನು ಹೇಳಲಿ; ಆವನ ದರ್ಶನವಾದರೆ ಸಾಕು. ಈ ನಿನ್ನ ದುಷ್ಟ ಮೋಹವೆಲ್ಲ ನಷ್ಟವಾಗುವದು. ನೀನು ಅಲ್ಲಿಗೆ ಹೋಗಿ ವರ್ಣಾಶ್ರಮ ಧರ್ಮದವಿಷಯವಾಗಿ ಅರಸನನ್ನು ಕೇಳು. ಅವನು ನಿಜವಾಗಿ ನಿನ್ನನ್ನು ಸಮಾಧಾನಗೊಳಿಸುವನು. ಅಹಿತವಾದ ಇಲ್ಲವೆ ಅಸತ್ಯವಾದ ಮಾತುಗಳನ್ನು ಅವನು ಎಂದೂ ನಿನಗೆ ಹೇಳುವದಿಲ್ಲ; ನನ್ನ ಮಾತನ್ನು ನಂಬಿ ಆದಷ್ಟು ಶೀಘ್ರವಾಗಿ ಅಲ್ಲಿಗೆ ಹೋಗು. ಭಾಗೀರಥೀ ನದಿಯನ್ನು ದಾಟಿ ಆಚೆಗೆ ಹೋಗಲಾಗಿ ಮಿಥಿಲಾಪಟ್ಟಣವು ನಿನಗೆ ಕಾಣುವದು. "ಶುಭಸ್ಯಶೀಘ್ರಂ" ಎಂಬಂತೆ ನೀನು ಅಲ್ಲಿಗೆ ಬೇಗ ಹೋಗುವ ಯತ್ನವಿಡು.

ಶುಕ—ತಥಾಸ್ತು.

---

## ೬ ದೇಶಸಂಚಾರ.

ತಂದೆಯ ಅಪ್ಪಣೆಯು ಮೇರೆಗೆ ನಾನು ಜನಕರಾಯನ ಬಳಿಗೆ ಹೋಗಬೇಕಷ್ಟೇ! ಹಿರಿಯರ ಒತ್ತಾಯಕ್ಕೆ ಮಾತ್ರ ಹೋಗಬೇಕಲ್ಲದೆ, ನನ್ನ ಮನಸ್ಸಿನಲ್ಲಿ ಅಲ್ಲಿಗೆ ಹೋಗುವದು ಎಳ್ಳಷ್ಟೂ ಇಲ್ಲ. ಮಕ್ಕಳ ಮದುವೆಗಾಗಿ ಜ್ಞಾನಸಂಪನ್ನನಾದ ನಮ್ಮ ತಂದೆಯೇ ಇಷ್ಟು ಆತುರಪಡುತ್ತಿದ್ದ ಬಳಿಕ, ಅಜ್ಞಾನಿಗಳಾದ ಮಾನ

ವರು ಹೇಗೆ ಮಾಡುತ್ತಿದ್ದಾರು? ನನ್ನ ಪ್ರಾಚೀನ! ಅವರೇನು ಮಾಡಿಯಾರು! ನಾನು ಓದುಬರಹವನ್ನರಿಯದೆ, ವೇದಶಾಸ್ತ್ರಾಧ್ಯಯನಗಳನ್ನು ಮಾಡದೆ ಶುದ್ಧಜೊಣಪನಾಗಿದ್ದರೆ, ಈ ಬಗೆಯ ವಿಚಾರಗಳೇ ನನ್ನಲ್ಲಿ ಅಂಕುರಿಸುತ್ತಿದ್ದಿಲ್ಲ. ನಾನು ಇಷ್ಟುದಿವಸ ಚಿಕ್ಕವನಿದ್ದೆನು; ನನಗೇನೂ ತಿಳಿಯುತ್ತಿದ್ದಿಲ್ಲ; ಈಗ ದೊಡ್ಡವನಾಗಿ ಎಲ್ಲವನ್ನೂ ತಿಳಿಯುವ ಶಕ್ತಿಯು ಗುರುಪ್ರಸಾದದಿಂದ ನನ್ನಲ್ಲಿ ಬಂದಿರುವದು. ನನ್ನ ಸುಖದುಃಖಗಳ ಭಾಗಕ್ಕೆ ಈಗ ನಾನೇ ಪಾತ್ರನು. ಹೀಗಿರಲು, ತಂದೆಯವರು ನನಗೇಕೆ ಒತ್ತಾಯಮಾಡುತ್ತಾರೆ? ಆದರೆ ಇಷ್ಟುಮಾತ್ರ ನಿಜವು. ಅದೇನೆಂದರೆ, ನನ್ನ ಬಾಲಲೀಲೆಗಳನ್ನು ನೋಡಿ ಇವರಿಗೆ ಆನಂದವಾಗಿರಬಹುದು; ನಾನು ಅನೇಕ ವಿದ್ಯಾಸಂಗ್ರಹಣ ಮಾಡಿದ್ದಕ್ಕೆ ಸಂತೋಷವಾಗಿರಬಹುದು; ನನ್ನ ಲಾಲನ-ಪಾಲನಗಳಿಂದಲೂ ಹರುಷಗೊಂಡಿರಬಹುದು. ಇಷ್ಟೆಲ್ಲ ಸುಖಗಳಿಗೆ ಮೂಲಾಧಾರನಾಗಿದ್ದ ನಾನು, ಈಗ ಅವರ ಮಾತು ನಡಿಸದೆ ಅವರ ಮನಸ್ಸು ನೋಯಿಸಲಿಕ್ಕೆ ಕಾರಣನಾಗುವದು, ವಿದ್ಯಾವಂತನೂ ತರುಣನೂ ಆದ ನನಗೆ ಶೋಭಿಸಲಾರದು. ಮಿಥಿಲಾನಗರಕ್ಕೆ ಹೋಗುತ್ತೇನೆಂದು ಒಮ್ಮೆ ಯಜಮಾನರಿಗೆ ಹೇಳಿ, ಈಗ ಹೋಗದಿದ್ದರೆ ಅವರಿಗೆ ಮತ್ತಿಷ್ಟು ಕೆಡಕೆನಿಸುತ್ತದೆ. "ಸಂತೋಷಂ ಜನಯೇತ್ ಪ್ರಾಜ್ಞಸ್ತದೇವೇಶ್ವರ ಪೂಜನಂ" ಎಂದು ಧರ್ಮಜ್ಞರು ಹೇಳಿರುವರು. ನಿನ್ನ ಮದುವೆಯಿಂದ ನಾನು ಸಂತುಷ್ಟನಾಗುತ್ತೇನೆಂದು ತಾತನು ಹೇಳುತ್ತಿರಲು, ನಾನು ಮದುವೆಮಾಡಿಕೊಳ್ಳುವದು ನ್ಯಾಯವು. ಆದರೆ ಮಾಡಲೇನು? ಸುಳ್ಳು ಸುಖಕ್ಕೆ ಮರುಳಾಗಿ ಮಹೇಂದ್ರಜಾಲದಂತೆ ಕ್ಷಣಿಕವಾಗಿರುವ ಸಂಸಾರದ ಕೊಳೆಪಾಟದಲ್ಲಿ ಬೀಳಲಿಕ್ಕೆ ನನ್ನ ಮನಸ್ಸು ಎಷ್ಟುಮಾತ್ರವೂ ಒಪ್ಪಲೊಲ್ಲದು. 'ಒಂದುಕಡೆಬಾವಿ, ಇನ್ನೊಂದುಕಡೆಕೆರೆ' ಹೀಗೆ ನನ್ನ ಅವಸ್ಥೆಯಾಗಿರುತ್ತದೆ. ಜನಕರಾಯನ ಬಳಿಗೆ ಹೋದರೆ ನನ್ನ ಸಂಶಯಗಳೆಲ್ಲ ನೀಗಿಹೋಗುತ್ತವೆಂದು ಅಪ್ಪಂದಿರು ಹೇಳುವರು. ಅದು ಎಷ್ಟೂ ನನಗೆ ನಂಬಿಗೆಯಿಲ್ಲ. ಎಲ್ಲಿಹೋದರೂ ನನ್ನ ಸಮಾಧಾನವಾಗುವಂತಿಲ್ಲ. ಹೆಚ್ಚಿಗೇನು ಹೇಳಲಿ? ಪ್ರತ್ಯಕ್ಷ ಬ್ರಹ್ಮದೇವರಲ್ಲಿ ಹೋದರೂ ನನ್ನಸಂಶಯ ನಿವಾರಣವಾಗುವಂತೆ ಕಾಣುವದಿಲ್ಲ. ಹೀಗಿರಲು ಆ ಯಃಕಶ್ಚಿತನಾದ ರಾಜನು ಉದ್ವಿಗ್ನವಾದ ನನ್ನ ಮನಸ್ಸನ್ನು ಸಮಾಧಾನಗೊಳಿಸುವ ಬಗೆಯು ಹ್ಯಾಗೆ? ಅದ್ದರಿಂದ ನಾನು ಅಲ್ಲಿಗೆ ಹೋಗುವದೇ ಇಲ್ಲ. ಇಲ್ಲಿಯೇ ಇದ್ದು ಈಶಭಜನೆಯಲ್ಲಿ ಕಾಲಕಳೆಯುವೆನು. ತಂದೆಯವರು ಬೇಕಾದಷ್ಟು ಸಿಟ್ಟುಮಾಡಲಿ. ಎಂದು ನಿಶ್ಚಯಿಸಿ ಶುಕರು ತಮ್ಮ ಆಶ್ರಮದಲ್ಲಿಯೇ ಉಳಿದರು.

ಮುಂದೆ ಒಂದೆರಡುದಿನ ಕಳೆದಮೇಲೆ ವ್ಯಾಸರು — ಬಾಳಾ ಶುಕಾ, ನೀನು ಜನಕನ ಕಡೆಗೆ ಎಂದು ಪ್ರಯಾಣಬೆಳೆಸುವೆ? ಎಂದು ತಾವಾಗಿಯೇ ಪ್ರಶ್ನಮಾಡಿದರು. ಆಗ ಶುಕನು ಅನ್ನುತ್ತಾನೆ — ಅಪ್ಪಾ, ಜನಕರಾಯನ ವಿಷಯವಾಗಿ ತಾವು ಅಲ್ಪಸ್ವಲ್ಪ ಹೇಳಿದ ಮಾತ್ರದಿಂದಲೇ ಅಲ್ಲಿಗೆ ಹೋಗಬೇಕೆಂದಿದ್ದ ನನ್ನ ಉತ್ಕಂಠೆಯು ಇಲ್ಲದಂತಾಗಿದೆ. ಯಾಕೆಂದರೆ, ‘ಜೀವನ್ಮುಕ್ತವಿದೇಹರಾಜನು’ ಎಂಬ ಶಬ್ದಗಳೇ ‘ಬಂಜೆಯ ಮಕ್ಕಳು’ ಎಂಬಂತೆ ಔಪಚಾರಿಕವಾಗಿ ಕಾಣುತ್ತವೆ; ಅವನ ವೃತ್ತಿಯು ಕೇವಲ ಡಾಂಭಿಕವೃತ್ತಿಯೆಂತಲೇ ಭಾಸವಾಗುತ್ತದೆ. ರಾಜ್ಯಭಾರಮಾಡುವ ಆ ರಾಜನು ಶರೀರಯುಕ್ತನಿರದೆ ದೇಹರಹಿತನಾಗಿರುವನೋ? ದೇಹಕ್ಕಾಗುವ ಸುಖದುಃಖಗಳಿಗೆ ಆತನು ಹೊರತಾಗಿರುವನೋ? ಕಾಯದ ಸುಖದುಃಖಗಳನ್ನು ತೊರೆದ ಬಳಿಕ ಆತನು ವಿರಕ್ತನಾಗನೋ? ವಿರಕ್ತಿಯು ಸೋಂಕಿದ ಬಳಿಕ ರಾಜ್ಯಕಾರಭಾರವು ಆತನಿಂದ ಸ್ವತಂತ್ರವಾಗಿ ಸಾಗುವದೋ? ಛೇ! ಇದೆಲ್ಲ ಅಖಂಡವಾಗಿ ಸುಳ್ಳೇಸರಿ. ಜೀವನ್ಮುಕ್ತನೂ ವಿದೇಹನೂ ಆದ ಪ್ರಾಣಿಯು ಸ್ವಸಂತೋಷದಿಂದ ಹ್ಯಾಗೆ ರಾಜ್ಯವಾಳಿಯಾನು? ಆ ರಾಜನ ಜೀವನ್ಮೋಕ್ಷವು, ಅನ್ನಪಾನಗಳನ್ನು ಮಾಡುವದು ಪ್ರತ್ಯಕ್ಷ ಕಾಣುತ್ತಿರಲಿಕ್ಕೆ ‘ಅನ್ನ ತೆಗೆದುಕೊಳ್ಳುವದಿಲ್ಲ’ ಎಂದ ಹಾಗೇ ಹೇಳಬೇಕು? ಅಪ್ಪಾ, ರಾಜ್ಯಕಾರಭಾರದಂಥ ದೊಡ್ಡ ವ್ಯವಹಾರವನ್ನು ಆತನು ಆರಂಭಿಸಿರುವಾಗ, ಅವನ ಇಂದ್ರಿಯಗಳು ವ್ಯಾಪಾರಪರಾಙ್ಮುಖವಾಗಿರುತ್ತವೆಂದು ಹೇಳಿದರೆ ಅದು ಹೇಗೆ ಒಪ್ಪುವದು? ಈಕೆ ಅಕ್ಕ, ಈಕೆ ತಂಗಿ, ಈಕೆ ತಾಯಿ, ಈಕೆ ಮಗಳು, ಇವಳು ವ್ಯಭಿಚಾರಿ, ಇವಳು ಪತಿವ್ರತೆ, ಇವನು ಕಳ್ಳ, ಈತನು ಸುಳ್ಳ, ಇವನು ತಪ್ಪುಗಾರ, ಇವನು ನಿರ್ದೋಷಿ ಇವೇ ಮೊದಲಾದವುಗಳ ತಿಳುವಳಿಕೆಯು ಇಲ್ಲದಿದ್ದರೆ, ಅವನು ಪ್ರಜಾಪಾಲವನ್ನು ಹ್ಯಾಗೆ ಸಾಗಿಸಿಯಾನು? ಕಹಿ, ಸೀ, ಹುಳಿ, ಉಪ್ಪು, ಕಾರ, ಒಗರು ಈ ಷಡ್ರಸಗಳ ತಿಳುವಳಿಕೆಯಿದ್ದ ಮೇಲೆ, ಮಿಕ್ಕ ವಿಷಯಲೋಲುಪರಾದ ಸಾಂಸಾರಿಕರಂತೆ ಅವನೂ ಭೋಗವನ್ನು ಭೋಗಿಸುವನೆಂದು ಹೇಳಲಿಕ್ಕೆ ನನಗಂತು ಭೀತಿಯು ತೋರಲೊಲ್ಲದು. ಅಹಾ! ರಾಜ್ಯದಂಥ ಪ್ರಚಂಡವ್ಯವಹಾರವನ್ನು ಮಾಡುತ್ತಿರುವಾಗ ಶತ್ರು, ಮಿತ್ರರೆಂಬ ಜ್ಞಾನವಾಗಲೇಬೇಕು. ಅಜ್ಞಾನದಿಂದ ಒಬ್ಬರಮೇಲೆ ವೈರವನ್ನೂ ಇನ್ನೊಬ್ಬರ ಮೇಲೆ ಪ್ರೀತಿಯನ್ನೂ ತೋರಿಸಲೇಬೇಕು. ಅಂಥ ಪ್ರಸಂಗದಲ್ಲಿ ಆತನ ಮುಕ್ತಿಯು ಮೂಲಿಗೊತ್ತಿ ಹೋಗದೆ ಹ್ಯಾಗೆ ಉಳಿದೀತು? ವೇದವೇತ್ತರಾದ ಬ್ರಾಹ್ಮಣರನ್ನೂ ಆಕಳು, ಆನೆ, ನಾಯಿ, ಚಾಂಡಾಲರನ್ನೂ ಸಮದೃಷ್ಟಿಯಿಂದ ಕಾಣಬೇಕೆಂದು

ಶ್ರೇಷ್ಠರಾದ ಸಾಧುಸಂತರು ಹೇಳುತ್ತಾರಷ್ಟೇ! ಆದರೆ ಅರಸನು ದುಷ್ಟರ ದಂಡಕನೂ, ಶಿಷ್ಟರ ಪಾಲಕನೂ, ಆಗಿರುವದರಿಂದ ಕಳ್ಳ, ಸುಳ್ಳ, ಮೋಸಗಾರ, ಕೊಲೆಗಾರ ಮುಂತಾದ ಪ್ರಜೋಪದ್ರವಿಗಳಾದ ಪ್ರಾಣಿಗಳನ್ನು ನಿಯಮನ ಮಾಡದೆ ಅವರಲ್ಲಿ ಸಮದೃಷ್ಟಿಯನ್ನು ಹ್ಯಾಗೆ ಇಟ್ಟಾನು? ಎಲ್ಲರಮೇಲೂ ಸಮದೃಷ್ಟಿಯನ್ನಿಟ್ಟರೆ ಪ್ರಜೆಗಳ ಸಂರಕ್ಷಣೆಯು ಯಥಾಸ್ಥಿತವಾಗಿ ಹ್ಯಾಗೆ ಸಾಗೀತು? ಸಾರಾಂಶ, ಇಂಥ ಅನೇಕ ಅಸಂಗತವ್ಯಾಪಾರಕ್ಕೆ ಒಳಗಾದ ಆ ರಾಜನು ಜೀವನ್ಮುಕ್ತನೆಂದೂ, ವಿದೇಹಿಯೆಂದೂ ನಾನು ಹೇಗೆ ನಂಬಲಿ? ಜೀವನ್ಮುಕ್ತರನ್ನು ನಾನು ಎಂದೂ ನೋಡಿಲ್ಲ. ಅದರಿಂದ ಹೀಗೆ ಸಂಶಯಗಳು ಉಂಟಾಗುತ್ತಿರಬಹುದೋ? ಒಮ್ಮೆ ಅಲ್ಲಿಗೆ ಹೋಗಿ ಈ ಸಂಶಯಗಳನಿವೃತ್ತಿಯನ್ನು ಮಾಡಿಕೊಂಡಾದರೂ ಬರಲಿಯಾ? ಅಥವಾ ಅರಸು ಜೀವನ್ಮುಕ್ತನಾಗಿ ಇರುವದೇ ಅಶಕ್ಯವೆಂದು ತಿಳಿದು ಅಂತರೀಶನೊಡನೆ ಆನಂದಗೊಳ್ಳುತ್ತ ಇಲ್ಲಿಯೇ ಕಾಲಕ್ರಮಣ ಮಾಡಲಿಯಾ? ಅಪ್ಪಾ ನನಗೇನೂ ತಿಳಿಯದಂತಾಗಿದೆ. ನಿಜವಾಗಿ ನಾನು ದಿಙ್ಮೂಢನಾಗಿದ್ದೇನೆ. ಮಿಥಿಲಾಧೀಶ್ವರನಿಂದ ನನ್ನ ಸಂಶಯಗಳೆಲ್ಲ ಬೈಲಾಗುತ್ತವೆಂದು ತಾವು ಖಂಡಿತವಾಗಿ ವಚನಕೊಟ್ಟರೆ ಮಾತ್ರ ನಾನು ಅಲ್ಲಿಗೆ ಹೋಗುತ್ತೇನೆ; ಇಲ್ಲದಿದ್ದರೆ ಅಲ್ಲಿಗೆ ಹೋಗಲಿಕ್ಕೆ ನನ್ನ ಮನಸ್ಸು ಎಷ್ಟು ಮಾತ್ರವೂ ಒಡಂಬಡುವದಿಲ್ಲ!

ಮಗನ ಈ ಮಾತುಗಳನ್ನು ಕೇಳಿ ವ್ಯಾಸರು—"ಹುಡುಗಾ! ನೀನು ಜನಕರಾಯನ ಪಟ್ಟಣಕ್ಕಂತೂ ಹೋಗು. ಅವನು ನಿನ್ನ ತರ್ಕ-ವಿತರ್ಕಗಳನ್ನೂ, ಸಂಶಯ-ಸಾನುಮಾನಗಳನ್ನು ದೂರಮಾಡಿ ಉತ್ತಮರೀತಿಯಿಂದ ನಿನ್ನನ್ನು ಸಮಾಧಾನಗೊಳಿಸುವನು. ರಾಜಸರಾಗಲಿ-ತಾಮಸರಾಗಲಿ ದಂಡೋಪಾಯದಿಂದಲೇ ಹಾದಿಗೆ ಬರತಕ್ಕವರೆಂಬ ಮಾತು ನಿಜವು. ಆದರೂ ಮನುಮಹಾತ್ಮರಂಥ ಸ್ಮೃತಿಕಾರರ ರಾಜಧರ್ಮಗಳನ್ನು ಪಾಲಿಸಿಯೂ ಕೂಡ ಆ ಜನಕನು ಜೀವನ್ಮುಕ್ತನೇ ಇರುತ್ತಾನೆ. ಜನಕರಾಜನಂಥ ವ್ಯವಹಾರಾತೀತನಾದ ಪುರುಷನ ದರ್ಶನಮಾತ್ರದಿಂದ ನೀನು ಪಾವನನಾಗುವೆ. ಶುಕಾ, ಸುಮ್ಮಸುಮ್ಮನೆ ದೊಡ್ಡವರ ಸಲುವಾಗಿ ಏನೂ ತಿಳಿಯದೆ ಹೀಗೆ ವಿಪರೀತವನ್ನು ಭಾವಿಸುವದು ಪ್ರಶಸ್ತವಾದದ್ದಲ್ಲ. ತಮ್ಮಾ, ತರ್ಕಕ್ಕೂ ಅನುಭವಕ್ಕೂ ಮಹದಂತರವದೆ. ಇದಕ್ಕಾಗಿಯೇ ನಾನು ಮಿಥಿಲಾನಗರಿಗೆ ಹೋಗೆಂದು ನಿನಗೆ ಹೇಳುವೆನು. ಅಲ್ಲಿ ಹೋದಬಳಿಕ ನಿನ್ನ ಎಲ್ಲ ಸಂಶಯಗಳು ನಷ್ಟವಾಗುವವು." ಎಂದು ಅಂದರು.

ತಾತನ ಅಪ್ಪಣೆಯನ್ನು ತಲೆಯಲ್ಲಾಂತು ಶುಕನು ಪ್ರಯಾಣದ ಸಿದ್ಧತೆಯಲ್ಲಿ ತೊಡಗಿದನು. ಮಗನ ಕಲ್ಯಾಣವನ್ನು ಬಯಸಿ ಮಾರ್ಗಕ್ಕೆ ಹಚ್ಚುವದಕ್ಕಾಗಿಯೇ

ವ್ಯಾಸರು ಹೀಗೆ ಅತಿ ಪ್ರೇಮದಿಂದಸಾಕಿ, ಸಲಹಿ, ಬೆಳೆಸಿದ ಮಗನನ್ನು ತಮ್ಮಿಂದ ಅತಿ ದೂರದಲ್ಲಿದ್ದ ಮಿಥಿಲಾ ನಗರಿಗೆ ಕಳಿಸಿದರಲ್ಲದೆ, ತಮ್ಮ ಕೂಡ ಅವಿಚಾರದಿಂದ ವರ್ತಿಸಿ ತಮ್ಮ ಮಾತು ಕೇಳದೆ ಆಜ್ಞೋಲ್ಲಂಘನ ಮಾಡಿದನೆಂದು ಅವನನ್ನು ಹೊರಕ್ಕೆ ಅಟ್ಟಲಿಲ್ಲ. ತಮ್ಮ ಉಪದೇಶವು ನಾಟಲಿಲ್ಲೆಂದು ತಿಳಿದು, ಮಗನಮೇಲೆ ಸಿಟ್ಟಿಗದೆ ಹೆರವರಿಂದಾದರೂ ಮಗನು ತಿಳಿದುಕೊಂಡು ಹಾದಿಗೆ ಬರಲೆಂದೂ, ಯಾರಿಂದಲೇ ಆಗಲಿ ತಮ್ಮ ಮಗನು ಉತ್ತಮ ಜ್ಞಾನಿಯಾಗಲೆಂದೂ ವ್ಯಾಸರು ಬಯಸಿದರು. ಸದಾಚಾರಸಂಪನ್ನನಾದ ತಮ್ಮ ಮಗನನ್ನು ಒಂದು ಅರೆನಿಮಿಷವಾದರೂ ಅಗಲಿರಲಾರದಂಥ ವ್ಯಾಸರು, ಅನುಭವಜನ್ಯ ಜ್ಞಾನವಾಗಬೇಕೆಂದು ಶುಕರನ್ನು ದೂರ ಕಳಿಸಬೇಕಾಯಿತು. ಸುಶಿಕ್ಷಿತರಾದ ತಂದೆ-ತಾಯಿಗಳು ಈ ಪ್ರಸಂಗವನ್ನು ನೆನಪಿಡತಕ್ಕದ್ದಾಗಿದೆ. ಯುಕ್ತಿ-ಪ್ರಯುಕ್ತಿಗಳಿಂದ ಮಕ್ಕಳನ್ನು ಜ್ಞಾನಸಂಪನ್ನರಾಗಿ ಮಾಡಬೇಕು. ತಮ್ಮ ಹತ್ತರದಲ್ಲಿಯೇ ಇಟ್ಟುಕೊಂಡು, ಮಕ್ಕಳ ಕಕ್ಕುಲತೆಗೆ ಬಲಿಬಿದ್ದು ಅವರನ್ನು ಮೂಢರನ್ನಾಗಿ ಮಾಡುವದು ಸರ್ವಥಾ ಅಪ್ರಶಸ್ತವು. ತಮ್ಮ ಮಾತು ಕೇಳಲಿಲ್ಲೆಂದು ಮಕ್ಕಳಮೇಲೆ ಮುನಿಸುಮಾಡಿ, ಸನ್ಮಾರ್ಗಕ್ಕೆ ಹಚ್ಚಲು ಯೋಗ್ಯಸ್ಥಾನಕ್ಕೆ ಕಳಿಸಲಾರದ ತಂದೆ-ತಾಯಿಗಳು ನಿಜವಾಗಿ ಆ ಬಾಲಕನ ಹಗೆಗಳೆಂತಲೇ ತಿಳಿಯಬೇಕು. ವ್ಯಾಸರಂಥ ಮಹನೀಯರು ಕೂಡ, ತಮ್ಮ ಮಗನು ಅನುಭವಜ್ಞಾನಿಯಾಗಬೇಕೆಂದು ಮಿಥಿಲಾನಗರಿಗೆ ಅಟ್ಟದ್ದನ್ನು ನೋಡಿದರೆ ನಮ್ಮ ಪ್ರಾಚೀನರ ಜ್ಞಾನಾರ್ಜನೆಯ ಲಾಲಸೆಯು ಎಷ್ಟಿತ್ತೆಂಬದು ಸಹಜವೇ ಗೊತ್ತಾಗುತ್ತದೆ. ಇವರು ಹಾಕಿಕೊಟ್ಟ ಮಾರ್ಗವನ್ನು ಸುಜ್ಞರಾದ ತಾಯಿ-ತಂದೆಗಳು ಹಿಡಿಯತಕ್ಕದ್ದೆಂದು ಬೇರೆಹೇಳಲಿಕ್ಕೆಬೇಡ.

ಪ್ರವಾಸದ ಸಿದ್ಧತೆಯನ್ನು ಮಾಡಿಕೊಂಡಬಳಿಕ ಶುಕಾಚಾರ್ಯರು ತಮ್ಮ ಪ್ರಿಯತಾತರಾದ ವ್ಯಾಸರ ಅಪ್ಪಣೆಯನ್ನು ತೆಗೆದುಕೊಳ್ಳಲು ತಮ್ಮ ಪರ್ಣಕುಟೀರವನ್ನು ಬಿಟ್ಟು ಶುಭಮುಹೂರ್ತದಲ್ಲಿ ಹೊರಬಿದ್ದರು. ಆಗ ಅವರ ಸ್ವರೂಪವು ಬಣ್ಣಿಸುವಂತಹದ್ದಿತ್ತು. ಶುಕರು ತಮ್ಮ ಮಸ್ತಕದಮೇಲೆ ಕಪಿಲವರ್ಣದ ಕೆಂಜಡೆಗಳನ್ನು ಅಚ್ಚುಕಟ್ಟಾಗಿ ಕಟ್ಟಿದ್ದರು. ಬೆನ್ನಮೇಲೆ ಕೃಷ್ಣಾಜಿನವನ್ನು ಹೊತ್ತಿದ್ದರು. ಹಣೆಯಮೇಲೆ ಗೋಪೀಚಂದನದ ಊರ್ಧ್ವತ್ರಿಪುಂಡ್ರನಾಮಗಳನ್ನು ಧರಿಸಿದ್ದರು. ಎದೆಯಮೇಲೆ ದ್ವಾದಶನಾಮಗಳನ್ನು ಹಚ್ಚಿದ್ದರು. ಕಂಠದಲ್ಲಿ ತುಳಸೀಮಣಿಯ ಮಾಲೆಯನ್ನೂ ಕೊರಳಲ್ಲಿ ಶುಭ್ರವಾದ ಯಜ್ಞೋಪವೀತವನ್ನೂ ಹಾಕಿದ್ದರು. ಟೊಂಕಕ್ಕೆ ವಲ್ಕಲದ ಪಂಜೆಯನ್ನು ಬಿಗಿದುಸುತ್ತಿದ್ದರು. ಬಲಗೈಯಲ್ಲಿ ದಂಡವನ್ನೂ ಎಡಗೈಯಲ್ಲಿ ಕಮಂಡಲುವನ್ನೂ ಹಿಡಿದಿದ್ದರು. ಕಾಲಲ್ಲಿ ಕಡಾವಿಗೆಯನ್ನು

ಮೈಟ್ಟಿದ್ದರು. ಇನ್ನೆಲ್ಲ ಸಿದ್ಧತೆಗಳಿಂದ ಶುಕರು ಮಿಥಿಲಾನಗರಿಗೆ ಹೊರಟಿರುತ್ತಾರೆಂದು ವ್ಯಾಸರು ತಾವಾಗಿಯೇ ತಿಳಿದುಕೊಂಡರು. ಇತ್ತ ಶುಕರು ತಂದೆಯಬಳಿಗೆ ಬಂದು ಅವರ ಅಡಿದಾವರೆಗಳಿಗೆ ಸಾಷ್ಟಾಂಗಪ್ರಣಾಮಮಾಡಿ—"ಅಪ್ಪಾ! ತಮ್ಮ ಅಪ್ಪಣೆಯಂತೆ ನಾನು ಜನಕರಾಜನ ದರ್ಶನಕ್ಕಾಗಿಮಿಥಿಲಾನಗರಿಗೆ ಹೋಗುತ್ತೇನೆ."ಎಂದು ನುಡಿದರು. ಮಗನ ಈ ಮಾತು ಕೇಳಿದಕೂಡಲೆ ವ್ಯಾಸರಿಗೆ, ಮಗನು ತಮ್ಮ ಅಪ್ಪಣೆಯನ್ನು ಪಾಲಿಸಿದನೆಂಬ ಆನಂದವೂ, ಆತನು ತಮ್ಮಿಂದ ಕೆಲವು ದಿವಸ ದೂರ ಅಗಲಿಹೋಗುವನೆಂಬ ದುಃಖವೂ ಇವೆರಡೂ ಒಮ್ಮೆಗೆ ಉಂಟಾದವು. ಆದರೂ ಪರಿಣಾಮದಕಡೆಗೆ ಲಕ್ಷ್ಯಗೊಟ್ಟು ಮಗನ ಪ್ರಯಾಣಕ್ಕೆ ವ್ಯಾಸರು ಒಪ್ಪಿದರು. ವ್ಯಾಸರು ಬಹು ಪ್ರೇಮದಿಂದ ಮಗನನ್ನು ತಬ್ಬಿಕೊಂಡು ಮೈಮೇಲೆ ಕೈಯ್ಯಾಡಿಸಿ ಪ್ರೀತಿಯಿಂದ—ಮಗುವೇ, ನಿನಗೆ ಅಖಂಡ ಕಲ್ಯಾಣವಾಗಲಿ. ಮಾರ್ಗವು ಮಂಗಳಕರವಾಗಲಿ. ನಿನಗೆ ದೀರ್ಘಾಯುಷ್ಯವುಂಟಾಗಲಿ. ಎಂದು ಆಶೀರ್ವಾದವನ್ನು, ಕೊಟ್ಟರು. ತಮ್ಮ ಶುಕನೇ, ನೀನು ಎಲ್ಲವಿಚಾರಬಲ್ಲವನಿರುತ್ತೀ. ನಿನಗೆ ಏನೂ ಹೇಳಬೇಕಾಗಿಲ್ಲ. ಮಿಥಿಲಾನಗರಿಗೆ ಹೋಗು. ಜನಕರಾಯನನ್ನು ಕಂಡುಕೊಳ್ಳು. ಆಮೂಲಾಗ್ರವಾಗಿ ಆತನ ವ್ಯವಹಾರಗಳನ್ನು ಅರಿತುಕೊಳ್ಳು! ಅಷ್ಟಿಷ್ಟಕ್ಕೆ ಅಧೈರ್ಯಗೊಂಡು ಮರಳಿ ಬರಬೇಡ. ಸಾಂಗೋಪಾಂಗವಾಗಿ ಸರ್ವವನ್ನು ತಿಳಕೊಳ್ಳು. ಸೃಷ್ಟ್ಯವಲೋಕನಮಾಡು. ಸೃಷ್ಟಿಯೊಳಗಿನ ಸರ್ವವ್ಯಾಪಕವಾದ ಚಮತ್ಕಾರಗಳನ್ನು ನೋಡಿ ಪರಮೇಶ್ವರನ ಸರ್ವವ್ಯಾಪಕತನವನ್ನು ಪರಿಶೋಧಿಸು. ಸತ್ಕರ್ಮವಿಷಯದಲ್ಲಿ ಉತ್ಸುಕತೆಯನ್ನು ಜಾಗೃತಗೊಳಿಸು. ವಿಶ್ವನಿರೀಕ್ಷಣದಿಂದಲೇ ವಿಶ್ವಾತ್ಮನಾದ ಪರಮೇಶ್ವರನಲ್ಲಿಭಕ್ತಿಯು ಸ್ಥಿರಗೊಳ್ಳುವದೆಂಬದನ್ನು ಮನಗಾಣು. ಆಚರಣಶುದ್ಧಿಗೂ, ತದ್ದ್ವಾರವಾಗಿ ಮೋಕ್ಷಪ್ರಾಪ್ತಿಗೂ ಪ್ರವಾಸವು ಉತ್ತಮಸಾಧನವೆಂಬದನ್ನು ಕಂಡುಹಿಡಿ. ಬಾಳಾ, ಏನೋ ಮದುವೆಗಾಗಿ ಇಷ್ಟೊಂದು ತಂದೆಯು ಪೀಡಿಸಿ ಹೊರಗಟ್ಟುತ್ತಾನೆಂದು ಮಾತ್ರ ಬಗೆಯಬೇಡ. ಎಷ್ಟೋ ಅರ್ಧಮರ್ಧತಿಳುವಳಿಕೆಯ ಹುಡುಗರು ಹಿರಿಯರು ಹೇಳಿದ ಮಾತನ್ನು ಕೇಳದೆ ಕೆಟ್ಟುಹೋಗಿದ್ದಾರೆ. ತಂದೆಯ ಕಟಕಟಿಯು ತಪ್ಪಲೆಂದು ಮಾತ್ರ ಎಲ್ಲಿಯೂ ಹೋಗಬೇಡ. ಚಿಕ್ಕಂದಿನಲ್ಲಿ ಹುಡುಗರಿಗೆ ತಂದೆ-ತಾಯಿಗಳು ಕೊಡುವತಾಪವು ಕೇವಲ ಮಕ್ಕಳ ಕಲ್ಯಾಣಕ್ಕಾಗಿಯೇ ಇರುತ್ತದೆಂಬದನ್ನು ಧ್ಯಾಸದಲ್ಲಿ ತಂದುಕೊಳ್ಳು. ಗೃಹಸ್ಥಾಶ್ರಮದಿಂದ ಅಕಲ್ಯಾಣವಾಗುತ್ತದೆಂದು ಅನುಭವವಿಲ್ಲದೆ ತಿಳಿದುಕೊಂಡು ಎತ್ತೆತ್ತೋ ಮನಬಂದತ್ತ ಓಡಿಹೋದೀ ಕಂಡೆಯಾ! ನಿನ್ನನ್ನಗಲಿ ನಾನು ಒಂದರಕ್ಷಣವಾದರೂ ಇರತಕ್ಕವನಲ್ಲ. ಏನು ಮಾಡ

ಲಿ, ನಿನ್ನ ಭಾವೀಸುಖಕ್ಕಾಗಿಯೇ ಈ ವಿಯೋಗದುಃಖವನ್ನು ತಡಕೊಳ್ಳಬೇಕಾಗಿದೆ. ಕಂದಾ, ಜನಕರಾಯನಲ್ಲಿ ಹೋದಕೆಲಸವು ತೀರುತ್ತಲೆ ಅರಗಳಿಗೆ ತಡಮಾಡದೆ ನಮ್ಮ ಆಶ್ರಮಕ್ಕೆ ಮರಳಿ ಬಾ. ಅಧ್ಯಯನ–ಅಧ್ಯಾಪನಗಳನ್ನು ಮಾಡುತ್ತ ಆನಂದದಿಂದ ಕಾಲಕಳೆಯೋಣ. ಮಗುವೆ, ನಿನ್ನನ್ನು ಈಗ ಕಳಿಸಬೇಕಾದರೆ ನನ್ನ ಜೀವದ ಸುತ್ತು ಬಂದದೆ! ಯಾಕಂದರೆ, ನೀನು ಕಣ್ಣಾಮುಂದೆ ಇದ್ದಾಗ ನಿನ್ನ ಗುಣಗಳು ಹುಣ್ಣಿವೆಯ ಬೆಳದಿಂಗಳಂತೆ ಸರ್ವೇಂದ್ರಿಯಗಳಿಗೆ ಆನಂದವನ್ನೀಯುತ್ತವೆ. ಅದೇ ನೀನು ಅಗಲಿಹೋದರೆ ಬೇಸಿಗೆಯ ಬಿಸಿಲಿನಂತೆ ನಿನ್ನ ಗುಣಗಳು ತಾಪವನ್ನು ಕೊಡುತ್ತವೆ. ನೀನಿದ್ದಾಗಿನ ಅಮೃತಮಯವಾದ ಕಾಲವು ನೀನು ಅಗಲಿದಾಗ ಹೇಗೆ ಬಂದೀತು? ನೀನು ಮಿಥಿಲಾಪಟ್ಟಣಕ್ಕೆ ಹೋದ ಬಳಿಕ ಈ ಆಶ್ರಮಸ್ಥಾನವು ಹಾಳುಗರಿಯದೆ ಹೇಗೆ ಬಿಟ್ಟೀತು. ಏನಾದದ್ದನ್ನು ತಡಕೊಳ್ಳುತ್ತೇನೆ. ನೀನು ಜಾಣನಾದರೆ ಸಾಕು. ಹೋಗಿ ಬಾ, ಎಂದು ಅಪ್ಪಣೆಕೊಟ್ಟರು. ಆಗ ಶುಕನು ಬಾರಿಬಾರಿಗೆ ತಂದೆಯ ಅಡಿದಾವರೆಗಳಿಗೆ ಮಣಿಯುತ್ತ — ಅಪ್ಪಾ, ವ್ಯಾಸತಾತರೆ, ಸರ್ವಸಂಗಪರಿತ್ಯಾಗಿಗಳಾದ ತಮ್ಮಂಥವರೇ ಹೀಗೆ ಪುತ್ರವ್ಯಾಮೋಹಕ್ಕೆ ಬಲಿಬಿದ್ದು ಚಡಪಡಿಸುತ್ತ ಕುಳಿತರೆ, ಸಾಂಸಾರಿಕರು ಹ್ಯಾಗೆ ಮಾಡುತ್ತಿದ್ದಾರು; ಅಗಲಿಕೆಯ ಸಲುವಾಗಿ ತಮಗೆ ಬಹಳ ದುಃಖವಾಗುತ್ತಿದ್ದೀತು; ದೂರಹೋಗುವೆನೆಂದು ಚಿಂತೆಯುಂಟಾಗುತ್ತಿದ್ದೀತು; ತಮ್ಮ ಕೈಕಾಲುಗಳಲ್ಲಿ ಓಡಾಡಿ ಪ್ರತಿಯೊಂದು ಕೆಲಸದಲ್ಲಿ ನೆರವಾಗುತ್ತಿದ್ದ ನಾನು ತುಸು ದಿವಸಗಳೇ ಅಗಲಿ, ಅಗಲುವದರಿಂದ ತಮ್ಮ ಮನಸ್ಸು ಖಿನ್ನವಾಗುತ್ತಿದ್ದರೂ ಆಗುತ್ತಿದ್ದೀತು. ನನ್ನ ಕಲ್ಯಾಣಕ್ಕಾಗಿಯೇ ಈಗ ನನ್ನನ್ನು ಕಳಿಸುವಿರಲ್ಲವೆ? ಇದನ್ನು ಮನಸ್ಸಿನಲ್ಲಿ ತಂದುಕೊಂಡು ಸಮಾಧಾನ ತಾಳಬೇಕು. ಹೆಚ್ಚಿಗೆ ಹೇಳಲಿಕ್ಕೆ ಬಾಲಕನು ಶಕ್ತನಾಗಲಾರನು, ಎಂದನು. ಇಷ್ಟರಲ್ಲಿ ಶುಕನ ಸನ್ಮಿತ್ರರಲ್ಲಿ ಕೆಲವರು ಮುನಿಪುತ್ರರು ನಿರೂಪಕೊಡುವದಕ್ಕಾಗಿ ಆಶ್ರಮದಿಂದ ಬಂದರು. ಅವರು ಶುಕರ ವಿನಯಾದಿ ಸದ್ಗುಣಗಳನ್ನು ತಮ್ಮ ತಮ್ಮೊಳಗೆ ಕೊಂಡಾಡುತ್ತ ಆಶ್ರಮದ ಹೊರಮಗ್ಗಲಿನ ಜಲಾಶಯದತನಕ ಸಾಗಿಬಂದು ಶುಕರನ್ನು ಕಳಿಸಿದರು. ಗೌರವದಿಂದ ಅವರನ್ನು ಆದರಿಸಿ ಕೈಮುಗಿದು ಪ್ರೇಮಾಲಿಂಗನ ತೆಗೆದುಕೊಂಡು ಶುಕರ ಅಪ್ಪಣೆಯಿಂದ ಎಲ್ಲರೂ ಹಿಂದಿರುಗಿದರು. ಇತ್ತ ಶುಕರಾದರೂ ನಿಶ್ಚಯದ ಮನಸ್ಸಿನಿಂದ ತಾತಂದಿರ ಅಪ್ಪಣೆಯಂತೆ ಪಯಣಗತಿಯಿಂದ ಮುಂದಕ್ಕೆ ಸಾಗಿದರು.

ವ್ಯಾಸಾಶ್ರಮದಿಂದ ಹೊರಟಬಳಿಕ ಶುಕರು ಪ್ರತಿದಿವಸ ಬಗೆಬಗೆಯ ವನೋಪವನಗಳನ್ನೂ, ದೇಶವಿದೇಶಗಳನ್ನೂ ನೋಡುತ್ತ ಮೇರುಪರ್ವತವನ್ನು ದಾಟ

ಕೆಲವುದಿವಸಗಳ ತರುವಾಯ ಹಿಮಾಲಯಪರ್ವತವನ್ನೇರಹತ್ತಿದರು. ಅಹಾ! ಆ ಹಿಮಾಚಲದ ಸೌಂದರ್ಯವನ್ನೇನು ವರ್ಣಿಸತಕ್ಕದ್ದು? ಅದು ಸ್ವಾಭಾವಿಕವಾಗಿಯೇ ವಿಹಾರಕ್ಷೇತ್ರವು. ಅದರ ಶುಭದರ್ಶನವು ಅರಸಿಕರಿಗೆ ಸಹ ಆನಂದವನ್ನು ಕೊಡುವಂತಹದು. ಅಂದಬಳಿಕ ರಸಿಕರ ಹೃದಯಕ್ಕೆ ಅದರ ಮನೋರಮದರ್ಶನದಿಂದ ಸ್ವರ್ಗಸುಖದ ಲಾಭವಾಗುವದೆನ್ನಲಿಕ್ಕೆ ಅಣುಮಾತ್ರವೂ ಸಂದೇಹವಿಲ್ಲ. ಈ ಪರ್ವತಪ್ರದೇಶದ ಕೆಲವು ಭಾಗಗಳು ಹಸರು ಎಳೆಗರುಕೆಯಿಂದ ಮಂಡಿತವಾಗಿದ್ದರೆ, ಬೇರೆ ಸ್ಥಳಗಳು ನೀಲ ಮತ್ತು ಹಳದೀಬಣ್ಣದ ಗಿಡಗಂಟೆಗಳಿಂದ ಶೋಭಿಸುತ್ತಿರುವವು. ಪರ್ವತದ ಒಂದು ಭಾಗವು ಒಳ್ಳೇ ನಿಬಿಡವಾದ ವೃಕ್ಷರಾಜಿಯಿಂದ ಒಪ್ಪುತ್ತಿದ್ದರೆ, ಬೇರೊಂದು ಭಾಗವು ಚಿರತುಷಾರಹಾರದಿಂದ ಅಲಂಕೃತವಾಗಿತ್ತು. ತರತರದ ಬಣ್ಣದ ಹೂಗೊಂಚಲುಗಳ ಅಲಂಕಾರಗಳಿಂದ ಸಿಂಗಾರಾದ ಬಳ್ಳಿಯೆಂಬ ತರುಣಿಯು, ತನ್ನ ಎಳೆಗುಡಿಗಳೆಂಬ ನಿಡಿದಾದ ತೋಳುಗಳಿಂದ ವೃಕ್ಷಪತಿಯನ್ನು ಆಲಿಂಗಿಸಿ ವಿಹಾರಮಾಡುತ್ತಿರುವಳು. ಎಲ್ಲೆಡೆಯಲ್ಲಿಯೂ ಸುಶೀತಲವಾದ ಸುಳಿಗಾಳಿಯು ಸೂಸುತ್ತಿರುವದು. ಹೂವಿನೊಳಗಿನ ಪರಾಗಧೂಳಿಯು ಗಾಳಿಯ ಸುಳಿಗುಂಟ ಸೂರಾಡಿ ಎಲ್ಲಕಡೆಗೂ ಸುಗಂಧವನ್ನು ಬೀರುತ್ತಿರುವದು. ಗಿಡಬಳ್ಳಿಗಳಿಂದ ಉದುರುತ್ತಿರುವ ಚಿತ್ರವಿಚಿತ್ರವರ್ಣದ ಹೂಗಳಿಂದ ಕೆಳಗಿನ ಭೂಪ್ರದೇಶವು, ಹಲವು ಬಣ್ಣದಿಂದ ಕೂಡಿದ ರತ್ನಗಂಬಳಿಯ ಹಾಸಿಗೆಯಂತೆ ಒಪ್ಪುತ್ತಿರುವದು. ಪರ್ವತದ ವನಪ್ರದೇಶದಲ್ಲಿ ಪಶುಪಕ್ಷಿಗಳಂತು ತೆರಪಿಲ್ಲದೆ ಸಂಚರಿಸುತ್ತಿರುವವು. ಪ್ರವಾಹಗಳ ಧಡಧಡಾಟದಿಂದಲೂ,ಪಕ್ಷಿಗಳ ಕಿಲಿಬಿಲಾಟದಿಂದಲೂ ಆ ವನಪ್ರದೇಶವು ನಾದಮಯವಾಗಿ ಹೋಗಿತ್ತು. ವಸಂತ, ಗ್ರೀಷ್ಮ, ಹೇಮಂತ, ವರ್ಷ ಮುಂತಾದ ಷಡ್‌ಋತುಗಳು ಈ ಸ್ಥಳದಲ್ಲಿ ಏಕಕಾಲಕ್ಕೆ ಕೂಡಿಕೊಂಡು ವಾಸಮಾಡಿಕೊಂಡಿದ್ದವೆಂದು ಹೇಳಿದರೆ, ಅದು ಅತಿಶಯೋಕ್ತಿಯಾಗದು. ಒಮ್ಮೊಮ್ಮೆ ಅತ್ಯಂತ ಶೀತಲದ ಪ್ರಾದುರ್ಭಾವವು, ಒಮ್ಮೊಮ್ಮೆ ಅತಿದಟ್ಟಿದ ಹಿಮದ ಮಂಜಿನಾಗಮನವು, ಒಮ್ಮೊಮ್ಮೆ ಮೇಘಮಾಲೆಯಿಂದ ಸಂಘಟಿತವಾದ ಆಕಾಶಮಂಡಲವು, ಒಮ್ಮೊಮ್ಮೆ ಗ್ರೀಷ್ಮಕಾಲದ ಅತ್ಯಲ್ಪವಾದ ಬಿಸಿಗಾಳಿಯು; ಹೀಗೆ ವಾತಾವರಣದ ಬೇರೆ ಬೇರೆ ಸ್ಥಿತ್ಯಂತರಗಳು ಇಲ್ಲಿ ಯಾವಾಗಲೂ ಅನುಭವಕ್ಕೆ ಬರುತ್ತಿದ್ದವು. ಹೀಗೆ ಎಲ್ಲ ಇಂದ್ರಿಯಗಳಿಗೂ ಆನಂದವನ್ನು ಬೀರುತ್ತಿರುವ ಆ ಹಿಮಾಚಲನ ಅವರ್ಣನೀಯ ಸೌಂದರ್ಯವನ್ನು ನೋಡಿ ಸೃಷ್ಟಿಕರ್ತನ ಕೌಶಲ್ಯಕ್ಕೆ ಶುಕರು ಬೆರಗಾದರು. ಈ ಹಿಮಗಿರಿಯ ಒಂದು ಇಳಕಲಲ್ಲಿ ಎಷ್ಟೋ ಮಹಾತ್ಮರು ಘೋರವಾದ ತಪಶ್ಚರ್ಯ

ದ್ವಾರಪಾಲಕನು ತಿಳಿದು, ಅವರ ಎದುರಿಗೆ ಬಂದು ಗಟ್ಟದನಿಯಿಂದ—ಏನೋ ಹಾರುವಾ, ನೀನು ಹುಟ್ಟುಮೂಕನೋ, ಹಾಳುದೆವ್ವ ಬಡಿದವನೋ! ಯಾತಕ್ಕೆ ಇಲ್ಲಿ ಬಂದಿರುವೆ? ಪ್ರತಿಯೊಂದು ಪ್ರಾಣಿಯ ಪ್ರವೃತ್ತಿಯು, ಸಂಕಲ್ಪ ವಿಲ್ಲದೆ ಹೀಗೆ ಎಂದೂ ಆಗುವದಿಲ್ಲೆಂಬದು ನನಗೆ ಗೊತ್ತಾಗಿದೆ. ಆದ್ದರಿಂದ ನಿನ ಗೇನು ಬೇಕಾಗಿರುವದು? ಅದನ್ನು ಹೇಳು. ಮಾತಾಡದಿದ್ದರೆ ಹೇಗೆ ತಿಳಿದೀತು. ಹುಚ್ಚಾ, ರಾಜಾಜ್ಞೆಯಿಲ್ಲದೆ ನೀನು ಒಳಗೆ ಹ್ಯಾಗೆ ಹೋದೀ? ಹೆಚ್ಚಿಗೇನುಹೇಳಲಿ? ನಿನ್ನ ಉದ್ದೇಶವನ್ನು ಹೇಳದಿದ್ದರೆ ನೀನು ಈ ನಗರದಲ್ಲಿ ಕಾಲಿಡುವದು ಸಹ ದುಸ್ತರ ವಾದೀತು! ಕುಲಗೋತ್ರಗಳು ಗೊತ್ತಾಗದ ಹೆರವರನ್ನು ಪಟ್ಟಣದಲ್ಲಿ ಅರೆಕ್ಷಣವಾ ದರೂ ನಿಲ್ಲಗೊಡಬಾರದೆಂದು ಜನಕಮಹಾರಾಜರ ಕಟ್ಟಪ್ಪಣೆಯಿರುತ್ತದೆ. ಅಂತೇ ತಮ್ಮನ್ನು ಹೀಗೆ ಮಾತಾಡಿಸಿದ್ದು. ತಮ್ಮ ಮುಖಚರ್ಯವನ್ನು ನೋಡಿದರೆ, ತಾವು ದೊಡ್ಡ ಬ್ರಾಹ್ಮಣರಾಗಿ ಕಾಣುತ್ತೀರಿ. ಹೀಗಿದ್ದು ನನ್ನ ಮಾತಿಗೆ ಉತ್ತರಕೊಡದೆ ಬಿಮ್ಮಗೆ ನಿಂತದ್ದು ತಮಗೆ ಉಚಿತವಲ್ಲ. ನಿಮ್ಮ ವರ್ಚಸ್ಸನ್ನು ನೋಡಿ ನಾನು ಬರಿಯ ಬಾಯುಮಾತಿನಿಂದ ನಿಮ್ಮನ್ನು ಮಾತಾಡಿಸಿದ್ದೇನೆ. ಇದನ್ನು ತಿಳಕೊಂಡು, ನಿಮ್ಮ ಕುಲ-ಶೀಲ ಗೊತ್ತು-ಗುರಿ ನನಗೆ ಮಾಡಿಕೊಟ್ಟು, ಮುಂದೆ ಸಂತೋಷದಿಂದ ಬೇಕಾದಲ್ಲಿ ತಾವು ಹೋಗಬಹುದು, ಎಂದು ಹೇಳಿದನು.

ಪ್ರತಿಹಾರಿಯು ಹೀಗೆ ಕೆಲವು ಕಠೋರ, ಕೆಲವು ಮೃದುನುಡಿಗಳನ್ನು ನುಡಿ ದದ್ದು ಕೇಳಿ, ಶುಕರಿಗೆ ಏನೂ ಅನಿಸಲಿಲ್ಲ. ಶಾಂತಮನಸ್ಸಿನಿಂದ ಅವರು ಆತನಿಗೆ ಹೇಳಿದ್ದೇನಂದರೆ,—ತಮ್ಮಾ, ಯಾತರ ಸಲುವಾಗಿ ನಾನು ಇಲ್ಲಿಗೆ ಬಂದಿ ದ್ದೆನೋ, ಅದೆಲ್ಲ ನಿನ್ನ ಮಾತಿನಿಂದಲೇ ಪೂರ್ಣವಾಯಿತು. ನಾನುಈ ವಿದೇಹ ನಗ ರವನ್ನು ಸೂಕ್ಷ್ಮದೃಷ್ಟಿಯಿಂದ ನೋಡಬೇಕೆಂದು ಬಂದೆನು;ಆದರೆ ಇದನ್ನು ಇನ್ನೇನೂ ನೋಡತಕ್ಕ ಕಾರಣವು ಉಳಿಯಲಿಲ್ಲ. ಯಾಕಂದರೆ, ಇಲ್ಲಿ ಪರಸ್ಥಳದ ಅಪರಿಚಿತರ ಪ್ರವೇಶವೇ ಆಗುವದು ದುಸ್ತರವೆಂದು ನೀನೇ ಹೇಳಿಬಿಟ್ಟೆ. ಅರಸನನ್ನು ಕಾಣ ಬೇಕೆಂದು ನಾನು ಬಹುಶ್ರಮಬಟ್ಟು ದೊಡ್ಡ ದೊಡ್ಡ ಬೆಟ್ಟ-ಗುಡ್ಡಗಳನ್ನೂ, ಗಿರಿ- ಗಹ್ವರಗಳನ್ನೂ, ಹೊಳೆ-ಹಳ್ಳಗಳನ್ನೂ, ದರಿ-ಕಂದರಗಳನ್ನೂ ದಾಟ ಇಲ್ಲಿಗೆ ಬಂ ದದ್ದೇ ನನ್ನ ಮೂರ್ಖತನವಾಯಿತು! ಛೇ, ನಿರರ್ಥಕವಾಗಿ ದಣಕೊಂಡೆನು. ಇದೇ ಸಮಯವನ್ನು ಈಶ್ವರಧ್ಯಾನದಲ್ಲಿ ಕಳೆದಿದ್ದರೆ ದೊಡ್ಡ ಲಾಭವಾಗುತ್ತಿತ್ತು. ಅಪ್ಪಂ ದಿರ ಆಜ್ಞೆಯಂತೆ ಬಂದದ್ದು ನಿಜವಾಗಿ ಅನುಚಿತವಾಯಿತು! ಹಿರಿಯರೇ ಕುಳಿತು ಹೀಗೆ ನನ್ನನ್ನು ಮೋಸಗೊಳಿಸಿದ್ದು ನನ್ನ ದುರ್ದೈವವಲ್ಲದೆ ಮತ್ತೇನು! ಅಕಟಾ! ಅವರೇನು ಮಾಡಿಯಾರು? ನನ್ನ ಪುರಾಕೃತ ದುರದೃಷ್ಟವು. ಹಣದ ಆಶೆಬುರುಕ

ತನವು ಮಾತ್ರ ಹೀಗೆ ಊರೂರು ತಿರಗಲಿಕ್ಕೆ ಹಚ್ಚುತ್ತದೆಂದು ನಾನು ಕೇಳಿದ್ದೆನು. ಧನದಿಚ್ಛೆಯಂತು ಕನಸುಮನಸ್ಸಿನಲ್ಲಿಯೂ ನನಗಿಲ್ಲ. ಆದರೂ ಹೀಗೆ ಪರಿಭ್ರಮಣಮಾಡಿಸುತ್ತಿರುವದು ನನ್ನ ಪ್ರಾರಕ್ತನವೇ ಖಂಡಿತವು! ಬರಿಯ ಧನಾಶೆಯೊಂದೇ ಹೀಗೆ ತಿರುಗಲಿಕ್ಕೆ ಹಚ್ಚುತ್ತದೆಂದು ಅನ್ನುವದಕ್ಕಿಂತ, ಯಾವದೇ ಆಶೆ ಬುರುಕತನವಾದರೂ ಚಕ್ರದಂತೆ ತಿರುಗಿಸುತ್ತದೆಂದು ಹೇಳುವದು ಸಯುಕ್ತಿಕವು. ಯಾಕಂದರೆ, 'ಜನಕರಾಯನನ್ನು ನೋಡಬೇಕು' ಎಂಬ ಆಶೆಯೇ ನನ್ನಲ್ಲಿಲ್ಲಂಟಾಗದಿದ್ದರೆ ನನ್ನ ಹಾಡು ಹೀಗೆಲ್ಲಿ ಆಗುತ್ತಿತ್ತು? ಶಿವ ಶಿವಾ! ಮೇರುಪರ್ವತವೆಲ್ಲಿ, ಈ ಮಿಥಿಲಾಪಟ್ಟಣವೆಲ್ಲಿ! ಒಂದು ರಾಜದರ್ಶನದ ತೃಷ್ಣೆ(ಆಶೆ)ಗೊಳಗಾಗಿ ಅಶ್ರಮದಿಂದ ಇಲ್ಲಿಯವರೆಗೆ ಕಾಲಿನಿಂದಲೇ ನಡೆದು ಬಂದದ್ದಕ್ಕೆ ಈ ಫಲವು ಸಿಕ್ಕದ್ದು ಶೋಚನಿಯವೋ, ಯೋಚನೀಯವೋ! ಬಂದದ್ದನ್ನು ಭೋಗಿಸಿಯೇ ತೀರಬೇಕು. ನಾನು ನಿಸ್ಪೃಹನಾದರೂ ಒಂದೇ ಒಂದು ಮೋಹಕ್ಕೆ ಒಳಪಟ್ಟು ಬಹು ದೂರದಿಂದ ದಣಿದು ಬಂದು ಒಬ್ಬ ಯಃಕಶ್ಚಿತನಾದ ಸೇವಕನಿಂದ ಇಂಥ ದುರವಸ್ಥೆಗೊಳಪಟ್ಟದ್ದು ಗರ್ಹಣೀಯವೇ ಸರಿ. ದೇವಾ, ಮಿಥಿಲಾಪುರವು ಒಂದು ಕ್ಷೇತ್ರವಲ್ಲ, ತೀರ್ಥವಲ್ಲ, ಸರಸ್ವತಿಯ ಮಂದಿರವಲ್ಲ, ದೇವರ ಮನೆಯಲ್ಲ; ಹೀಗಿದ್ದರೂ ನಾನು ಇಲ್ಲಿಗೆ ತೊಳಲಿ ಬಳಲಿ ಬಂದು ಆಕಸ್ಮಾತ್ತಾಗಿ ಪ್ರತಿಬಂಧಕ್ಕೊಳಗಾದೆನು. ಇರಲಿ. ಈಶ್ವರೇಚ್ಛೆ! ಎಂದು ಅಂದುಕೊಂಡು ಸಮಾಧಾನ ತಂದುಕೊಂಡು ಶುಕರು ಮತ್ತೂ ಮೊದಲಿನಂತೆ ಸ್ತಬ್ಧರಾಗಿ ನಿಂತುಕೊಂಡರು.

ಶುಕಾಚಾರ್ಯರ ಶಾಂತವಾದ ಭಾಷಣದಿಂದ ದ್ವಾರಪಾಲಕನು ಮಾತ್ರ ಮೆತ್ತಗಾದನು. ಇವನು ಯಾವನೋ ಒಬ್ಬ ಮಹಾಪುರುಷನಿರಬೇಕೆಂದು ತಿಳಕೊಂಡು ಅವನು ಶುಕರಿಗೆ ಪ್ರತಿಬಂಧಮಾಡಿದ್ದಕ್ಕೂ, ದುರುತ್ತರ ನುಡಿದಿದ್ದಕ್ಕೂ ಖಿನ್ನನಾದನು. ಅರಸನಿಗೆ ಈ ಸಂಗತಿ ತಿಳಿದರೆ ಆತನು ಸಿಟ್ಟಾಗಿ ತನ್ನನ್ನು ಏನು ಮಾಡುತ್ತಾನೋ ಎಂದು ಹೆದರಿದನು. ಸೇವಾಧರ್ಮವು ಪರಮ ಗಹನವಾದದ್ದೆಂದು ಬಲ್ಲವರು ಹೇಳುವದು ಸುಳ್ಳಲ್ಲ. ತಕ್ಕಂತೆ ಸೇವೆಮಾಡಿದರೂ ಕಷ್ಟ, ಮಾಡದಿದ್ದರೂ ಕಷ್ಟ. ಪ್ರಸಂಗದಲ್ಲಿ ಶೌರ್ಯ ತೋರಿಸಿದರೂ ಕಷ್ಟ, ಬಿಟ್ಟರೂ ಕಷ್ಟ. ತನ್ನ ಜಾಣತನವನ್ನು ತೋರಿಸಿದರೂ ಕಠಿಣ, ತೋರಿಸದಿದ್ದರೂ ಕಠಿಣ. ಹೀಗೆ ಊಳಿಗದಾರನ ಬಾಳು ಯಾವ ಬಗೆಯಿಂದ ನೋಡಿದರೂ ನಿರರ್ಥಕವೇ ಸರಿ. ವಂಶಪರಂಪರೆಯಿಂದ ಪರಸೇವೆಯಲ್ಲಿಯೇ ಕಾಲಕಳೆದವರಿಗೆ ಅದು ಮೈಯ್ಯುಂಡಿರುವದರಿಂದ ಅವರು ಸೇವೆಯು ಒಂದು ದೊಡ್ಡ ಭೂಷಣವೆಂದು ತಿಳಕೊಂಡಿರುತ್ತಾರೆ; ಅದೊಂದು ಬಹುಮಾನವೆಂದು ಬಗೆಯುತ್ತಾರೆ; ಕ್ಷುಲ್ಲಕವೃತ್ತಿಯಲ್ಲಿ

ಸಹ ತಮ್ಮ ಅಧಿಕಾರವನ್ನು ಮುಂದುಮಾಡಿ ಮಂದಿಯಲ್ಲಿ ಮೆರೆಯುತ್ತಾರೆ; ಏನಾದರೂ ನಿಮಿತ್ತದಿಂದ ಆ ಅಧಿಕಾರವು ತಪ್ಪಿಹೋದರೆ, ಹೊಟ್ಟೆಬೇನೆ ಹಚ್ಚಿಕೊಂಡು ಸೊರಗಿಸಾಯುತ್ತಾರೆ. ಪ್ರಪಂಚದಲ್ಲಿ ಜನರು ಹೀಗೆ ದುಃಖಕ್ಕೇ ಸುಖವೆಂದು ಭಾವಿಸಿಮರುಳಾಗುತ್ತಾರೆ! ಹೀಗೆಯೋಚಿಸ್ಸಿದ್ವಾರಪಾಲಕನುಖಿನ್ನನಾಗಿ ಶುಕರನ್ನು ಕುರಿತು ಬಹುಪ್ರಕಾರದಿಂದ ಹೇಳಿಕೊಳ್ಳಹತ್ತಿದನು.—ಮಹಾರಾಯರೇ, ತಾವು ಬೇಕಾದಲ್ಲಿಗೆ ದಯಮಾಡಿಸಬಹುದು. ತಮ್ಮನ್ನು ತಡೆದದ್ದು ಸರ್ವಾಪರಾಧವಾಗಿದೆ. ನನ್ನ ತಪ್ಪನ್ನು ದಯಮಾಡಿ ಕ್ಷಮಿಸಬೇಕು. ತಮ್ಮಂಥ ದೊಡ್ಡವರು ಕ್ಷಮಾರೂಪವಾದ ಶಸ್ತ್ರದಿಂದ ತ್ರಿಭುವನವನ್ನು ಗೆಲ್ಲುವಿರಿ. ತಮಗೆ ಇಂಥ ಸೈರಣೆಯು ಅಮೂಲ್ಯವಾದ ಅಲಂಕಾರವೇ ಸರಿ. ಪಾಮರನಾದ ನನಗೆ ಎಂಥವರನ್ನು ತಡೆಯಬೇಕು, ಎಂಥವರನ್ನು ಒಳಗೆ ಬಿಡಬೇಕು ಎಂಬ ಜ್ಞಾನವಿಲ್ಲದ್ದರಿಂದ, ನಮ್ಮಿಂದ ಇಂಥಪ್ರಮಾದಗಳು ಘಟಿಸುತ್ತಿರುತ್ತವೆ. ಇವನ್ನು ತಾವು ಮಹನೀಯರಾದದರಿಂದ ಅಲಕ್ಷಿಸಿ, ನನ್ನನ್ನು ಉದ್ಧರಿಸಬೇಕು, ಎಂದು ಅತಿ ನಮ್ರತೆಯಿಂದ ಹೇಳಿಕೊಳ್ಳುತ್ತ ಅವರ ಕಾಲಿಗೆರಗಿದನು. ದ್ವಾರಪಾಲಕನ ಪ್ರಾರ್ಥನೆಯನ್ನು ಕೇಳಿ ಶುಕರು,—ತಮ್ಮಾ, ದ್ವಾರರಕ್ಷಕಾ, ಇದರಲ್ಲಿ ನಿನ್ನದೇನು ತಪ್ಪು? 'ಒಡೆಯರ ಹೇಳಿಕೆ ಬಡಿಗೆಯಮಾಟ' ಎಂಬ ನಾಣ್ಣುಡಿಯು ನನಗೆ ಗೊತ್ತಿಲ್ಲವೇ! ಸ್ವಾಮಿಕಾರ್ಯದಲ್ಲಿ ಹೀಗೆ ಜಾಗರೂಕನಾಗಿರುವದೇ ನಿನ್ನ ಧರ್ಮವಾಗಿದೆ. ನಿನ್ನಮೇಲೆ ನಾನು ಯಾಕೆ ಸಿಟ್ಟಾಗಲಿ? ನಿನ್ನ ಒಡೆಯನಮೇಲಾದರೂ ಸಿಟ್ಟಾಗಲಿಕ್ಕೆ ಕಾರಣವಿಲ್ಲ. ಯಾಕಂದರೆ, ಕಂಡಕಂಡವರು ಅರಮನೆಯಲ್ಲಿ ಒಳನುಗ್ಗಿದರೆ ರಾಜನ ಸುರಕ್ಷತೆಯು ಹ್ಯಾಗೆ ಉಳಿದೀತು. ಮಿತ್ರನಂತೆ ಶತ್ರುಗಳು ಸಹ ಒಳಹೊಕ್ಕು ರಾಜನನ್ನು ಘಾಯಮಾಡದೆ ಬಿಡಲಿಕ್ಕಿಲ್ಲ; ನಿಮ್ಮೊಡೆಯನು ರಾಜಧರ್ಮ ಪದ್ಧತಿಯಂತೆ ಹೀಗೆಪ್ರತಿಬಂಧಮಾಡಿರುವದರಿಂದ ಅವನಮೇಲೂ ನಾನುಕೋಪಿಷ್ಠನಾಗುವಂತಿಲ್ಲ! ಇಲ್ಲಿ ನನಗೆ ಪ್ರತಿಬಂಧವಾದದ್ದರ ತಪ್ಪು ಹೆರವರದು ಯಾರದೂಅಲ್ಲ; ಅದು ನನ್ನದೇ ಅದೆ. ಯಾಕಂದರೆ, ನಾನು ರಾಜದರ್ಶನವೆಂಬ ಆಶಾಪಾಶಕ್ಕೆ ಯಾಕೆ ಒಳಗಾಗಬೇಕು? ಹೆರವರ ಬಾಗಿಲಿಗೆ ಹೋಗುವದು ಹುಲ್ಲಿಗಿಂತ ಹಗುರೆಂದು ತಿಳಿದೂ ತಿಳಿದು, ಹಾಗೆ ಯಾಕೆ ಮಾಡಬೇಕು? ತಾನು ಮಾಡಿದ್ದನ್ನು ತಾನು ಉಣ್ಣದೆ ಅನ್ಯರು ಉಂಡಾರೇನು? ಛೀ, ಛೀ! ಸರ್ವಾಂಶದಿಂದ ಇದರಲ್ಲಿ ನನ್ನದೇ ತಪ್ಪು! ಎಂದು ಹೇಳಿದನು.

ಶುಕಾಚಾರ್ಯರ ಈ ಭಾಷಣವನ್ನು ಕೇಳಿ, ಅವರ ಉದಾರವಿಚಾರಕ್ಕೆ ಸೇವಕನು ತಲೆದೂಗಿದನು. ಆತನ ಮೊದಲಿನ ಸೊಕ್ಕೆಲ್ಲ ಅಡಗಿ ಅದರ ಸಳ

ದಲ್ಲಿ ಪೂಜ್ಯಬುದ್ಧಿಯು ಅಂಕುರಿಸಿತು. ಆಗ— ಸ್ವಾಮಿ, ವಿಪ್ರೋತ್ತಮರೇ, ನಾನು ತಮ್ಮ ಮುಖದಿಂದ ಕೆಲವು ಮಾತುಗಳನ್ನು ಕೇಳಿಕೊಳ್ಳ ಬಯಸುತ್ತೇನೆ. ದಯಮಾಡಿ ಹೇಳಬೇಕು, ಎಂದು ಆ ದ್ವಾರಪಾಲಕನು ಕೇಳಿಕೊಂಡನು. ದೊಡ್ಡವರು ಹೀನನುಡಿಗೆ ಕುಗ್ಗುವವರೂ ಅಲ್ಲ, ಹೊಗಳುತ್ತ ಕುಳಿತರೆ ಉಬ್ಬುವವರೂ ಅಲ್ಲ. ಸೇವಕನ ಬಿನ್ನಹಕ್ಕೆ ಶುಕರು ಒಪ್ಪಿ, ಬೇಕಾದದ್ದನ್ನು ಕೇಳಿಕೊಳ್ಳಲಿಕ್ಕೆ ಆತನಿಗೆ ಹೇಳಿದರು.

ದ್ವಾರಪಾಲಕ— ದೇವರೂ, ತಮ್ಮಂಥವರ ಸನ್ನಿಧಿಯಲ್ಲಿ ಏನಾದರೂ ಒಂದು ಮಾತಾಡಲಿಕ್ಕೆ ಭಯಬರುತ್ತದೆ. ಆದರೂ ತಾವು ಶಾಂತಿಯ ಮೂರ್ತಿಗಳಾದುದರಿಂದ, ಧೈರ್ಯಗೊಂಡು ತಮ್ಮನ್ನು ಕೇಳಿಕೊಳ್ಳುವದೇನಂದರೆ,—ನಾವು ಯಾವಾಗಲೂ ಸುಖದುಃಖವೆಂದು ಮಾತಾಡುತ್ತಿರುತ್ತೇವೆ. ಆದರೆ ಸುಖವೆಂದರೆ ಯಾವದು? ದುಃಖವೆಂದರೆ ಯಾವದು? ಹಗೆಯೆಂದು ಯಾರಿಗನ್ನಬೇಕು? ಹಿತಕರ್ತನೆಂದು ಯಾರಿಗೆ, ಹೇಳಬೇಕು?

ಶುಕ— ಬಾಗಿಲಕಾಯುವವನಾದ ನಿನ್ನಲ್ಲಿ ಕೂಡ ಇಂಥ ಸುವಿಚಾರ ಹುಟ್ಟಿದ್ದಕ್ಕೆ ನನಗೆ ಬಹು ಸಂತೋಷವಾಗುತ್ತದೆ. ತಿಳಿದವರು ತಮಗೆ ಬಂದದ್ದನ್ನು ತಿಳಿಯದವರಿಗೆ ಹೇಳುವದೇ ಧರ್ಮವಾಗಿದೆ. ನೀನು ಪರತಂತ್ರತೆಯಲ್ಲಿ ಹಗಲಿರಳು ಕಾಲಕಳೆದಿದ್ದರೂ, ಒಮ್ಮಿಂದೊಮ್ಮಿಗೆ ಇಂಥ ಒಳ್ಳೆಯ ವಿಚಾರಗಳು ನಿನ್ನಲ್ಲಿ ಹೊಳೆದದ್ದು ನಾನು ಸಾಮಾನ್ಯವೆಂದು ತಿಳಿದಿಲ್ಲ. ಪ್ರೀತಿಪೂರ್ವಕವಾಗಿ ಹೇಳುತ್ತೇನೆ ಕೇಳು.—“ತನಗೆ ಲಗ್ನವಾಗಬೇಕು, ಮಕ್ಕಳಾಗಬೇಕು, ಧನಸಂಚಯವಾಗಬೇಕು, ಮನೆಮಾರು ವೆಗ್ಗಳವಾಗಬೇಕು, ಹೀಗೆ ಚಿಂತಿಸುವವರಿಗೆ ಸಾಂಸಾರಿಕರೆಂದೆನ್ನುವರು. ಇವರು ಆಗಾಗ್ಗೆ ಒದಗುತ್ತಿರುವ ದುಃಖಗಳನ್ನು ಸಹನಮಾಡಿಕೊಳ್ಳಲೇ ಬೇಕಾಗುತ್ತದೆ. ದುಃಖವೆಂದರೆ ಕೇವಲ ‘ಅಯ್ಯಯ್ಯೋ’ ಎಂದು ಎದೆಎದೆ ಬಡಕೊಂಡು ಅಳುವದಲ್ಲ. ಆಕ್ರೋಶವು ದುಃಖದ ಕೊನೆಯಮೆಟ್ಟು. ದುಃಖದ ಮೂಲಸ್ವರೂಪವು ಅಶಾಂತಿಯಂತಲೇ ಹೇಳಬೇಕು. ಯಾವಯಾವ ಅವಸ್ಥೆಯಲ್ಲಿ ಅಂತಃಕರಣದ ಶಾಂತತಾಭಂಗವಾಗುವದೋ, ಆಯಾ ಅವಸ್ಥೆಯು ದುಃಖಮಯವೇ ಇರುವದು. ಎಲ್ಲರಿಗೂ ಆ ಅವಸ್ಥೆಯು ತಿಳಿಯುವದಿಲ್ಲೆಂಬದು ಮಾತ್ರ ನಿಜವು. ಯಾಕಂದರೆ, ನಗಾರಿಯ ಸಪ್ಪಳದಲ್ಲಿ ಟುಮುಕಿಯ ಸಪ್ಪಳವು ಕೇಳಲಾರದು. ಇಲ್ಲವೆ ವೀಣೆಯ ಎಲ್ಲ ತಂತಿಗಳ ಒಟ್ಟಿನ ನಾದದಲ್ಲಿ, ಪ್ರತಿಯೊಂದು ತಂತಿಯ ಸೂಕ್ಷ್ಮ ಸ್ವರವು ಕೇಳುವದಿಲ್ಲ. ಅದೇ ಮೇರೆಗೆ ಆಕ್ರೋಶದ ದುಃಖಭರದಲ್ಲಿ ಸಣ್ಣಪುಟ್ಟ ದುಃಖಗಳು ಸಂಸಾರಿಕರಿಗೆ ತಿಳಿಯುವದೇ ಇಲ್ಲ.

ತಿಳಿದರೂ ಅತ್ತಕಡೆಗೆ ಅವರ ಲಕ್ಷ್ಯವಿರುವದಿಲ್ಲ. ಆದರೆ ಸೂಕ್ಷ್ಮದರ್ಶಿಗಳ ಸ್ಥಿತಿಯು ಹಾಗಿರುವದಿಲ್ಲ. ಸಪ್ತಸ್ವರಗಳನ್ನು ಬೇರೆ ಬೇರೆಯಾಗಿ ತಿಳಿಯುವದರಲ್ಲಿ ಕುಶಲರಾದ ಗಾಯಕರು, ಒಂದುಕ್ಷ ತಂತಿಯನಾದವು ಕುಗ್ಗಿದರೆ ಸಾಕು, ಕೂಡಲೆ ಅದನ್ನು ಕಂಡು ಹಿಡಿಯುವರು. ಇದೇ ಮೇರೆಗೆ ಅಂತಃಕರಣದ ಶಾಂತತೆಯನ್ನು ನೋಡುತ್ತಿರುವ ಮಹಾತ್ಮರು, ರೂಢಿಯ ಮೂಲಕ ಶಾಂತತೆಗೆ ತುಸು ಭಂಗಬಂದಿತೆಂದರೆ ಅದನ್ನು ಕೂಡಲೆ ಗೊತ್ತುಹಿಡಿದು ಅದೇ ದುಃಖವೆಂದು ಬಗೆಯುತ್ತಾರೆ. ಈ ಮಾತು ಸತ್ಯವೇಸರಿ. ವ್ಯವಹಾರದಲ್ಲಿಯೂ ಶಾಂತಮನುಷ್ಯನಿಗೆ ಸುಖಿಯೆಂತಲೂ, ಅನೇಕ ಉಪದ್ವ್ಯಾಪಮಾಡುವವನಿಗೆ ದುಃಖಿಯೆಂತಲೂ ಅನ್ನುವದುಂಟು. ಮನಸ್ಸು ಶಾಂತವಿದ್ದರೆ ನಮಗೆ ಗಾಢನಿದ್ರೆ ಬರುತ್ತದೆ. ಅದೇ ಅಸ್ವಸ್ಥಮನಸ್ಸಾಗಿದ್ದರೆ ಹಾಸಿಗೆತುಂಬ ಹೊರಳುತ್ತ ಬೀಳಬೇಕಾಗುವದು. ಸಾರಾಂಶ, ಮನಸ್ಸಿನ ಸ್ವಸ್ಥತೆಯೇ ಸುಖವೆಂತಲೂ, ಅಸ್ವಸ್ಥತೆಯೇ ದುಃಖವೆಂತಲೂ ತಿಳಿಯಬೇಕು. ವ್ಯವಹಾರದಲ್ಲಿ ಒಮ್ಮೊಮ್ಮೆ ನಾವು ಕೈಕೊಂಡ ಕಾರ್ಯವು ಸಾಧಿಸಿತೆಂದರೆ ಸುಖಪಡುತ್ತೇವೆ. ಅದೇ ಕಾರ್ಯವು ಕಾಲವಶದಿಂದ ಕೆಟ್ಟುಹೋಯಿತೆಂದರೆ ದುಃಖಪಡುತ್ತೇವೆ. ಹೀಗೆ ಕ್ಷಣಕ್ಷಣಕ್ಕೆ ಬದಲಾಗುವ ಸುಖದುಃಖಗಳು ಸುಖದುಃಖಗಳೇ ಅಲ್ಲ. ಕಾರ್ಯಸಾಧಿಸಿದಾಗ ನಾವು ಸಂತೋಷಗೊಳ್ಳದೆಯೇ ಇದ್ದರೆ, ಕಾರ್ಯಕೆಟ್ಟಾಗ ದುಃಖವೆಂಬದು ನಮಗೆ ಹೇಗೆ ಉಂಟಾಗುತ್ತಿತ್ತು! ಸಂಸಾರದೊಳಗಿನ ಆನಂದವು ದುಃಖಕ್ಕೆ ಕಾರಣವಾಗುವದರಿಂದ ಸಂಸಾರವು ದುಃಖಮಯವಾಗಿರುತ್ತದೆಂದು ಜ್ಞಾನಿಗಳು ಹೇಳುತ್ತಾರೆ. ನಿಜವಾದ ಸುಖವೆಂದರೆ, ಯಾವ ಅವಸ್ಥೆಯಲ್ಲಿಯೂ ಮನಸ್ಸಿನ ಶಾಂತತೆಗೆ ಭಂಗಬರಬಾರದು. ಈ ಮನಃಶಾಂತಿರೂಪವಾದ ನಿತ್ಯಸುಖವನ್ನು ದೊರಕಿಸುವ ಉಪಾಯಗಳನ್ನೇ ಜಾಣರಾದವರು ಕೈಕೊಳ್ಳಬೇಕು. ಸಾಂಸಾರಿಕರು, ತಮ್ಮ ಸುಖಸಾಧನಗಳಿಗೆ ಪ್ರತಿಬಂಧವನ್ನು ಮಾಡುವವರೇ ವೈರಿಗಳೆಂತಲೂ, ಹಾಗೆ ಪ್ರತಿಬಂಧ ಮಾಡದವರೇ ಮಿತ್ರರೆಂತಲೂ ಭಾವಿಸುತ್ತಾರೆ; ಆದರೆ ಜಾಣರಾದವರು ಮಾತ್ರ ಶತ್ರು-ಮಿತ್ರರನ್ನು ಸಮನಾಗಿಯೇತಿಳಿಯುವರು. ಸಂಸಾರಬಿಟ್ಟ ವಿರಕ್ತರು, ಏಕಾಂತವಾಸ, ಆತ್ಮಚಿಂತನ, ವೇದಾಂತವಿಚಾರ ಇವೇ ಸುಖಗಳೆಂತಲೂ, ಕಾಮ, ಕ್ರೋಧ, ಪ್ರಮಾದಾದಿಗಳೇ ದುಃಖಗಳೆಂತಲೂ ತಿಳಕೊಳ್ಳುತ್ತಾರೆ. ಅಂಥವರು ಸಮಾಧಾನವೇ ಸುಖವೆಂತಲೂ, ಸಮಾಧಾನ ಭಂಗವೇ ದುಃಖವೆಂತಲೂ ಗ್ರಹಿಸುವದು ಆಶ್ಚರ್ಯವಲ್ಲ." ಶುಕರ ಈ ಸಂಭಾಷಣವನ್ನು ಕೇಳಿ ಪ್ರತಿಹಾರಿಯು ಸಮಾಧಾನಹೊಂದಿ ಅವರನ್ನು ಬೇಕಾದಲ್ಲಿಗೆ ಹೋಗಗೊಟ್ಟನು.

ಶುಕರು ಅರಮನೆಯ ಪಾಗಾರದ ಸೌಂದರ್ಯವನ್ನು ನೋಡುತ್ತ ಮುಖ್ಯ ಮಂದಿರದ ಕಡೆಗೆ ಸಾಗಿದರು. ಆದರ ಎಡಬಲಗಳ ಕಟ್ಟಡಗಳಲ್ಲಿ ಧನಾಢ್ಯರಾದ ವ್ಯಾಪಾರಸ್ಥರು ಮುತ್ತು, ಮಾಣಿಕ, ವಜ್ರ, ವೈಡೂರ್ಯ, ಹವಳ, ಗೋಮೇದಿಕ, ಪುಷ್ಯರಂಗ, ಪಚ್ಚೆರತ್ನ, ನೀಲಮಣಿ ಈ ನವರತ್ನಗಳನ್ನೂ, ನಾನಾಪ್ರಕಾರದ ಅಂದವಾದ ಆಭರಣಗಳನ್ನೂ ಮಾರಲಿಕ್ಕೆ ಇಟ್ಟಿದ್ದರು. ಮತ್ತೊಂದು ಕಡೆಯಲ್ಲಿ ಹಸ್ತಿದಂತದ ಚಿತ್ರವಿಚಿತ್ರ ಪ್ರಾಣಿಶರೀರಗಳನ್ನೂ ಪದಾರ್ಥಗಳನ್ನೂ ಕ್ರಮಗೊಳಿಸಿ, ಗಿರಾಕಿಗಳ ಮನಸ್ಸು ಆಕರ್ಷಿಸುವಂತೆ ಮಾಡಿದ್ದರು. ಬೇರೊಂದು ಕಟ್ಟಡದಲ್ಲಿ ಬೆಳ್ಳಿ--ಬಂಗಾರದ ಬಗೆಬಗೆಯ ಆಭರಣಗಳನ್ನು ಮಾರಾಟಕ್ಕೆ ಹಚ್ಚಿದ್ದರು. ಇಂಥ ಅನರ್ಘ್ಯವಾದ ಪದಾರ್ಥಗಳನ್ನು ಕೊಳ್ಳುವವರೂ, ಮಾರುವವರೂ, ನೋಡಬಂದವರೂ ಅಲ್ಲಿ ಹಲವರಿದ್ದರು. ಅವರ ಸಂದಣಿಯೊಳಗಿಂದ ಶುಕಾಚಾರ್ಯರು ಮುಂದಕ್ಕೆ ಪಾರಾಗಿಹೋಗಬೇಕಾದರೆ ಸಾಕುಬೇಕಾಯಿತು. ಹಲವು ವ್ಯಾಪಾರಗಳನ್ನು ಮಾಡಿ ಮಾಡಿ ಕೋಟ್ಯಾಧೀಶರಾದ ಶ್ರೀಮಂತರ ಅಂಗಡಿಗಳೆಲ್ಲ ಇದೇ ಭಾಗದಲ್ಲಿದ್ದವು. ವ್ಯಾಪಾರಸ್ಥರು ಗಿರಾಕಿಗಳ ಚಿತ್ತರಂಜನವಾಗಿ, ತಮ್ಮ ಅಂಗಡಿಗೇ ಅವರು ಬರಬೇಕೆಂದು, ದೇವಗಂಧರ್ವರ ಚಿತ್ರಗಳನ್ನು ಬರೆಸಿ, ಆ ಪಟಗಳನ್ನು ಸಾಲಾಗಿ ಅಂಗಡಿ ತುಂಬ ಹಚ್ಚಿದ್ದರು. ಈ ಅಂಗಡಿ, ಈ ವಸ್ತು, ಈ ಪೇಟೆ, ಈ ಗಿರಾಕಿ, ಈ ಕೊಡಕೊಳ್ಳೋಣ, ಇವೆಲ್ಲ ಗೊಂದಲಗಳನ್ನು ನೋಡಿ ಶುಕರ ಮನಸ್ಸಿಗೆ ಬೇಸರ ಉಂಟಾಯಿತು. ಉದ್ವೇಗದ ಮನಸ್ಸಿನಿಂದ ಅವರು —ನೋಡಿದಿರಾ, ಈ ಜನರು ಒಂದು ಕಾಸಿನ ಉಳಿತಾಯಕ್ಕಾಗಿ ಎಷ್ಟು ಜೀವಕಳಕೊಳ್ಳುತ್ತಾರೆ. ಹಸಿವೆ-ನೀರಡಿಕೆಗಳ ಪರಿವೆ ಇಲ್ಲದೆ, ಮಾರಾಟ-ಮಾರಾಟವೆಂದು ಹೇಗೆ ಗೋಳಿಡುತ್ತಾರೆ. ವ್ಯಾಪಾರ-ವ್ಯಾಪಾರವೆಂದು ಇದಕ್ಕೇ ಅನ್ನುತ್ತಿದ್ದರೆ, ಇದಕ್ಕೆ ದೂರಿಂದಲೇ ಸಾಷ್ಟಾಂಗ ನಮಸ್ಕಾರವು! ವ್ಯಾಪಾರದ ಬರಿಯ ಗಾಳಿಬಡಿದರೆ ಸಾಕು. ಪ್ರಾಣಿಗಳು ಭ್ರಷ್ಟರಾಗಿ ಹೋಗಲಿಕ್ಕೆ ಅನುಮಾನವಿಲ್ಲ. ಯಾಕಂದರೆ, ಈ ವ್ಯಾಪಾರಿಗಳು ಸುಳ್ಳು ಮಾತಾಡಲಿಕ್ಕೂ, ಪದಾರ್ಥಗಳ ದಾರಣೆಯನ್ನು ಏರಿಸಲಿಕ್ಕೂ, ತಗಲು ತಕ್ಕಡಿ-ಮಾಪುಗಳನ್ನು ಉಪಯೋಗಿಸಲಿಕ್ಕೂ, ಗಿರಾಕಿಗಳ ಕಣ್ಣಲ್ಲಿ ಮಣ್ಣು ಹೊಯ್ಯಲಿಕ್ಕೂ ಎಷ್ಟೂ ಹೇಸುವದಿಲ್ಲ. ಪಾಪ! ಇವರು ಹೀಗೆ ಮಾಡದಿದ್ದರೆ ಇವರ ಹೆಂಡಿರು-ಮಕ್ಕಳಿಗೆ ಹೊನ್ನಿನ ವಸ್ತ್ರ-ಒಡವೆಗಳು ಹೇಗೆ ದೊರೆತಾವು! ಇರಲಿ. ಇದನ್ನು ತೆಗೆದುಕೊಂಡು ನಾನು ಮಾಡುವದೇನು? 'ಮಾಡಿದವರ ಪಾಪ ಆಡಿದವರ ಬಾಯಲ್ಲಿ' ಎಂಬಂತೆ ನಾನೂ ಪಾಪದ ಪಾಲುಗಾರನಾಗಬೇಕಾದೀತು. ಹೀಗೆಂದು ತಿಳಿದು ಶುಕಾಚಾರ್ಯರು ನೆಟ್ಟಗೆ ಜನಕರಾಯನಿದ್ದ ಮಂದಿರಕ್ಕೆ ಹೊರಟು

ಹೋದರು. ಅಲ್ಲಿಯೂ ದ್ವಾರರಕ್ಷಕನು ಅವರನ್ನು ಒಳಗೆಹೋಗಗೊಡಲೊಲ್ಲನು. ನಮ್ಮ ಆಚಾರ್ಯರು ತಮ್ಮ ಮೊದಲಿನ ಕಾಯಕದಂತೆ ಈಶ್ವರಸ್ಮರಣಮಾಡುತ್ತ ವೀರಗಲ್ಲಿನಹಾಗೆ ಸ್ತಬ್ಧರಾಗಿ ನಿಂತುಕೊಂಡರು. ಬಿಸಿಲು-ನೆಳಲುಗಳನ್ನೆರಡೂ ಸಮಾನವೆಂದು ತಿಳಿಯುವಂಥ ಆ ಶುಕಾಚಾರ್ಯರು, ಅವನ ಪ್ರತಿಕಾರಕ್ಕೆ ಕುಗ್ಗಲೂ ಇಲ್ಲ; ಕಾಡಲೂ ಇಲ್ಲ. ಈಶಸ್ತವನ ಮಾಡುತ್ತ ಆನಂದದಿಂದ ಅಲ್ಲಿಯೇ ನಿಂತರು.

## ೭. ಸತ್ಕಾರ.

ದೈವಯೋಗದಿಂದ ಜನಕರಾಯನ ಮುಖ್ಯಮಂತ್ರಿಯು ಅಷ್ಟರಲ್ಲಿ ಅದೇ ಮಾರ್ಗದಲ್ಲಿ ಬಂದನು. ಆವನು ಬಹು ವರ್ಚಸ್ವಿಯಾದ ಶುಕಮೂರ್ತಿಯನ್ನು ನೋಡಿ, ಅವರಿಗೆ ಸಾಷ್ಟಾಂಗನಮಸ್ಕಾರ ಹಾಕಿದನು; ಮತ್ತು ಆ ಮುಹನೀಯರಿಗೆ ಬಹು ಪ್ರಕಾರದಿಂದ ಹೇಳಿಕೊಂಡು, ರಾಜಮಂದಿರದ ಎರಡನೇ ಪಟಾಂಗಣಕ್ಕೆ ಅವರನ್ನು ಕರೆದೊಯ್ದನು. ಆ ಸ್ಥಳದಲ್ಲಿ ಒಂದು ಅಂದವಾದ ಉಪವನವಿತ್ತು. ಅದರಲ್ಲಿ ನಾನಾತರದ ಹೂವಿನಗಿಡಗಳನ್ನು ಹಚ್ಚಿದ್ದರು. ಅವುಗಳಲ್ಲಿ ಹೂಗಳು ಅರಳಿದ್ದರಿಂದ ಹೂವಿನ ಸುಗಂಧವು ನಾಲ್ಕು ಕಡೆಗೂ ಇಡಿಗಿತ್ತು. ಅದನ್ನೆಲ್ಲ ತೋರಿಸಿ ಆಚಾರ್ಯರನ್ನು ಮುಂದಿನ ಮತ್ತೊಂದು ಪಟಾಂಗಣಕ್ಕೆ ಕರೆದುಕೊಂಡು ಹೋದನು. ಇಲ್ಲಿ ಹಿಮಗೃಹವಿತ್ತು. ಅದು ಕಾರಂಜಿಯ ತುಂತುರುಹನಿಗಳಿಂದ ತುಂಬಿ ಮಂಜುಗವಿದಂತಾಗಿತ್ತು. ಶೀತೋಪಚಾರದ ಸಾಹಿತ್ಯಗಳೆಲ್ಲ ಅಲ್ಲಿ ತುಂಬಿದ್ದವು. ಅದರಿಂದ ಈ ಸ್ಥಳವು ಹಿಮಾಚಲದೊಳಗಿನಬರ್ಫದ ಗವಿಯಂತಾಗಿತ್ತು. ಇಲ್ಲಿಗೆ ಬಂದಕೂಡಲೆ ಶುಕಾಚಾರ್ಯರ ದಾಹವು ದಣುವೆಲ್ಲ ಶಾಂತವಾಯಿತು. ಅಷ್ಟರಲ್ಲಿ ಸೇವಕರು ತಂದ ಪನ್ನೀರಿನಿಂದ ಆ ಮಂತ್ರಿಯು ಶುಕರ ಪಾದಪ್ರಕ್ಷಾಲನಮಾಡಿ, ತನ್ನ ಸೂಕ್ಷ್ಮವಸ್ತ್ರದಿಂದ ಒರಿಸಿ, ಯಥಾವಿಧಿಯಾಗಿ ಅತಿಥಿಪೂಜೆಯನ್ನು ಮಾಡಿದನು; ನರ್ತನಕಲೆಯಲ್ಲಿ ನಿಪುಣರಾದ ತರುಣಿಯರಿಂದ ನೃತ್ಯಮಾಡಿಸಿದನು; ಗಾನವಿದ್ಯೆಯಲ್ಲಿ ಬುದ್ಧಿವಂತರಾದ ಮುಗ್ಧೆಯರಿಂದ ಗಾಯನಮಾಡಿಸಿದನು. ಬಳಿಕ ಈ ತರುಣಬ್ರಾಹ್ಮಣರಿಗೆ ತೊಂದರೆ ಬಾರದಂತೆ ಸೇವೆಯನ್ನು ಮಾಡುತ್ತಿರಬೇಕೆಂದು ಅಲ್ಲಿದ್ದ ಹೆಂಗಳೆಯರಿಗೆ ಕಟ್ಟುಮಾಡಿ, ಪ್ರಧಾನನು ಹೊಂಟು ಹೋದನು.

ಇತ್ತ ಪ್ರಧಾನನ ಅಪ್ಪಣೆಯಂತೆ ಆ ವೇಶ್ಯೆಯರು ಶುಕರಿಗೆ ಸುಗಂಧದ್ರವ್ಯಗೂಡಿದಎಣ್ಣೆಯನ್ನು ಮೈಗೆ ತೊಡೆದು, ಪನ್ನೀರು ಸುರಿದ ಬಿಸಿಬಿಸಿನೀರಿನಿಂದ ಮಜ್ಜನರೂ

ಡಿಸಿದರು; ನಾನಾಪ್ರಕಾರದ ಪಕ್ವಾನ್ನಗಳನ್ನು ಸಿದ್ಧಗೊಳಿಸಿಕೊಟ್ಟರು; ಸವಿಮಾತಿನಿಂದ ಸಂತೋಷಗೊಳಿಸಿದರು. ಇಷ್ಟರಲ್ಲಿ ಸೂರ್ಯನು ಅಸ್ತಂಗತನಾಗಲು ಆ ಸ್ತ್ರೀಯರು ಶುಕಾಚಾರ್ಯರನ್ನು ಅಂತಃಪುರದೊಳಗಿನ ಉಪವನಕ್ಕೆ ಕರೆದುಕೊಂಡು ಹೋದರು. ಅದು, ನೋಡಿದ ಮಾತ್ರದಿಂದಲೆ ವಿರಕ್ತರೂ ಸಹ ಕಾಮವಿಕಾರಕ್ಕೊಳಗಾಗಬೇಕು, ಇಷ್ಟು ಅನುಪಮವಾಗಿತ್ತು. ಶುಕರಮೈಕಾಂತಿ, ಕೆಂಜೆಡೆ, ಕುಡಿಹುಬ್ಬು, ನಿಡುಮೂಗು, ನಗೆಗಣ್ಣು, ಮೈಮಾಟ ಇವುಗಳನ್ನು ನೋಡಿ ನೋಡಿ ಅಲ್ಲಿರುವ ಹೆಂಗಸರೆಲ್ಲ ಮೋಹಪರವಶರಾದರು. ಹೇಗಾದರೂ ಮಾಡಿ ಈ ಮಹಾರಾಯನನ್ನು ತಮ್ಮ ಮೋಹಪಾಶದಲ್ಲಿ ಸಿಕ್ಕೊಳ್ಳಬೇಕೆಂದು ಬಯಸಿ, ಅವರು ಗುರುತಿಲ್ಲದಿದ್ದರೂ ನಾಚದೆ ಆಗ್ರಹದಿಂದ ಶುಕರನ್ನು ಮಾತಾಡಿಸಹತ್ತಿದರು; ಪರಿಚಯವಿಲ್ಲದಿದ್ದರೂ ಅನುಮಾನಗೊಳ್ಳದೆ ಪಾದಸಂವಾಹನ ಮಾಡಹತ್ತಿದರು; ಸ್ವಭಾವಗೊತ್ತಿಲ್ಲದಿದ್ದರೂ ಅವಿಶ್ವಾಸಗೊಳ್ಳದೆ ಅವರ ಮುಂದೆ ತಮ್ಮ ಒನಪು-ಒಯ್ಯಾರಗಳನ್ನು ತೋರಹತ್ತಿದರು; ಸುಮ್ಮಸುಮ್ಮನೆ ಓರೆನೋಟದಿಂದ ಆ ಮುನಿಕುಮಾರರನ್ನು ನೋಡುವರು; ತಮ್ಮ ಎದೆಯ ಮೇಲಿನ ಸೆರಗನ್ನು ತೆಗೆಯುವರು; ಕೆಲಸವಿಲ್ಲದೆ ಮುಗುಳುನಗೆ ನಗುವರು; ಶುಕರು ಬೇಡೆಂದರೂ ಕೇಳದೆ, ಹೂವಿನ ಹಾರಗಳನ್ನು ಅವರ ಕೊರಳಲ್ಲಿ ಹಾಕುವರು; ಬಗೆಬಗೆಯ ಬಣ್ಣದ ಬಟ್ಟೆಗಳನ್ನುಟ್ಟು-ತೊಟ್ಟು ಮಂದಗಮನದಿಂದ ಅವರೆದುರಿಗೆ ಸುಳಿದಾಡುವರು. ಇವೇ ಮೊದಲಾದ ಸ್ತ್ರೀಚೇಷ್ಟೆಗಳನ್ನು ಅಕಾರಣವಾಗಿ ತೋರಿಸಿ, ಶುಕರ ಮನಸ್ಸನ್ನು ಹರಣಮಾಡಬೇಕೆಂದು ಆ ಸ್ತ್ರೀಯರು ಬಹು ಪ್ರಯಾಸಬಟ್ಟರು. ಆದರೆ ಜಿತೇಂದ್ರಿಯರಾದ ಆ ಮುನಿಪುತ್ರರ ಮುಂದೆ ಇವುಗಳ ಆಟವೇನೂ ನಡೆಯಲಿಲ್ಲ; ಅವರ ಮನಸ್ಸು ರತಿಮಾತ್ರವೂ ವಿಕಾರವಾಗಲಿಲ್ಲ. ಅವರು ಆ ಎಲ್ಲ ಹೆಂಗಳೆಯರಲ್ಲಿ ತಾಯಿಯಂತೆಯೇ ಸಮದೃಷ್ಟಿಯನ್ನಿಟ್ಟರು. ವಿಷಯಾಂಧರಾಗಿದ್ದರೆ ಇಷ್ಟು ಹೊತ್ತಿನಲ್ಲಿ ಅವರು ಕಾಮಚೇಷ್ಟೆಗೆ ಮರುಳಾಗಿ ಮದನಬಾಧೆಯಿಂದ ಕೊರಗುತ್ತಿದ್ದರು. ಶಿವ ಶಿವಾ! ಶುಕರು ಅಂಥವರೇ? ಇಂದ್ರಿಯಗಳನ್ನು ಗೆದ್ದವರು, ವಿಷಯ ಸುಖವು ವಿಷವೆಂದು ನಂಬಿದವರು; ಆತ್ಮಾನುಭವದಿಂದ ಆನಂದಭರಿತರಾದ ವೀರರು. ಇವರ ಮನಸ್ಸನ್ನು ಭ್ರಷ್ಟಮಾಡುವ ಸಾಮರ್ಥ್ಯವು ಆ ಪೊಟ್ಟ ಸೂಳೆಯರಿಂದ ಹೇಗಾದೀತು? ಬೆಂಕಿಯನ್ನು ತಡವಿದ ಹುಲ್ಲಿನಂತೆ ಅವರು ದಗ್ಧರಾಗಿ ಹೋದರು. ಇದಿರಲಿ.

ಸ್ತ್ರೀವ್ಯಾಮೋಹದಲ್ಲಿ ತ್ರಿಮೂರ್ತಿಗಳೇ ಬೇಗುದಿಗೊಳ್ಳುತ್ತಾರೆ. ಹೀಗಿದ್ದು ಈ ವಿಪ್ರೋತ್ತಮನನ್ನು ಕಾಮಪಾಶದಲ್ಲಿ ಬಿಗಿಯುವದೇನಾಶ್ಚರ್ಯವು. ಎತ್ತಾದ

ರೂಮಾಡಿ ಇವರಚಿತ್ತಹರಣಮಾಡೋಣವೆಂದು ಬಗೆದು, ಆ ವೇಶ್ಯೆಯರಲ್ಲಿ ಪ್ರೌಢೆಯಾದವಳೊಬ್ಬಳು ಶುಕರನ್ನು ಕುರಿತು—ಸ್ವಾಮಿ, ಪುರುಷರು ಬಾಯ್ಬಡಿಕರಿರುತ್ತಾರೆಂಬಮಾತು ಸುಳ್ಳಲ್ಲ. ಅವರು ತಮಗೆ ಸ್ತ್ರೀಸುಖವು ಬೇಕಿದ್ದರೂ ಬೇಡಾದವರಂತೆ ನಟಿಸಿ, ಹೆಂಗಳೆಯರನ್ನು ಮೋಸಮಾಡುತ್ತಾರೆ; ಅವರನ್ನು ಮದನಬಾಧೆಗೆ ಒಳಪಡಿಸಿ ಕೊರಗಿಸಿ ಸೊರಗಿಸುತ್ತಾರೆ. ಈಗ ನೀವೇ ನೋಡಿರಿ. ನಮ್ಮ ರೂಪಲಾವಣ್ಯಗಳನ್ನೂ, ಮುರುಕು-ಮುರವತ್ತುಗಳನ್ನೂ, ಅಂಗಸೌಷ್ಟವವನ್ನೂ ಮನದಣಿ ನೋಡಿ, ಏನೂ ಅರಿಯದವರಂತೆ ಬೆಪ್ಪಗೆ ಕುಳಿತಿರುವಿರಿ. ನಾವು ತಮಗೆ ಮಾಡಿದ ಕಾಮೋದ್ರೇಕದಉಪಚಾರಗಳಿಗೆ ತಾವು ಮೊದಲೇ ಬೇಡೆಂದು ಅನಾದರಮಾಡಿದ್ದರೆ, ನಾವೆಲ್ಲಿ ನಿಮಗಿಷ್ಟು ಜುಲುಮೆ ಮಾಡುತ್ತಿದ್ದೆವು! ಪ್ರತ್ಯಕ್ಷ ಮದನನ ಪುತ್ಥಳಿಯಂಥ ನಿಮ್ಮ ಸ್ವರೂಪಸೌಂದರ್ಯಕ್ಕೂ, ತಾರುಣ್ಯ-ಲಾವಣ್ಯಕ್ಕೂ ನಾವೆಲ್ಲಿ ಮರುಳಾಗುತ್ತಿದ್ದೆವು? ಈ ಅದೃಷ್ಟಮಾರಬಾಧೆಯಿಂದ ನಾವೆಲ್ಲಿ ಇಷ್ಟು ಜರ್ಜರವಾಗುತ್ತಿದ್ದೆವು? ಅಂತೇ ಪುರುಷರು ಕಠಿಣಹೃದಯರೆಂಬುವದು,' ಎಂದು ನುಡಿದಳು.

ಅದನ್ನು ಕೇಳಿ ಶುಕರು—ತಾಯಿ, ನಿನ್ನ ಮಾತು ನಿಜವೋ ಸುಳ್ಳೋ ನಿನಗೇ ಗೊತ್ತು. ತಮಗೆ ಅನುಕೂಲವಾಗದ ಗಂಡಸರನ್ನು ಹಳಿಯುವದು ಹೆಂಗಸರ ಹುಟ್ಟುಗುಣವಾಗಿದೆ. ನಿಮ್ಮ ಹುಚ್ಚಿಗೆ ಬಿದ್ದು ಸುರಾಗ್ರೇಸರನು ಸಹಸ್ರ ಭಗಗಳುಳ್ಳವನಾದನು; ಚಂದ್ರನು ಕ್ಷಯಕರನಾದನು. ಬಹಳ ಹೇಳುವದೇನು! ಅವತಾರಿಕನಾದ ಶ್ರೀರಾಮನು ಸಹ ವನವನ ತಿರುಗುತ್ತ ಬಳಲಿದನು. ಕ್ಷಣಿಕಸುಖಕ್ಕೆ ಮರುಳಾಗಿ ಪರಪುರುಷರನ್ನು ಹಾವಭಾವವಿಲಾಸಾದಿಗಳಿಂದ ಮೆಚ್ಚಿಸಿಕೊಂಡು, ಹುಚ್ಚು ಹಿಡಿಸುವದರಲ್ಲಿ ನಿಮ್ಮ ಆಪಸ್ವಾರ್ಥವೇ ಕಂಡುಬರುವದಿಲ್ಲೇನು? 'ತಮ್ಮ ಎಲೆಯಲ್ಲಿ ಕತ್ತೆ ಸತ್ತುಬಿದ್ದಿರಲು, ಮಂದಿಯ ಎಲೆಯ ನೊಣಜಾಡಿಸುವ ಭರಕ್ಕೆಬಿದ್ದ ಮೂರ್ಖ'ರಂತೆ ನಿಮ್ಮ ಸ್ಥಿತಿಯಾಗಿದೆ. ಅದಕ್ಕೆ ಗಂಡಸರೇನು ಮಾಡಿಯಾರು? ಎಂದು ಅಂದರು. ಬಳಿಕ ಆ ಪ್ರೌಢೆಯು—'ಅಹುದಹುದು. ನಿಮ್ಮ ನ್ಯಾಯವಂತಿಕೆಯನ್ನು ವಿಷ್ಣುಪತ್ನಿಯಾದ ಲಕ್ಷ್ಮೀದೇವಿಯು ಹೇಳೇಹೇಳುತ್ತಾಳೆ. ಪುರುಷರ ಕಾಲಲ್ಲಿ ಗಂಡನ ಮನೆ ಬಿಟ್ಟು ಕರವೀರಪುರದಲ್ಲಿ ಪರದೇಶಿಯಾಗಿ ಕುಳಿತದ್ದು ಯಾರಿಗೆ ಗೊತ್ತಿಲ್ಲ; ಅಹಲ್ಯೆಯಂಥ ಪರಮ ಪಾವನೆಯು ಗಂಡನ ಸಲುವಾಗಿಯೇ ಕಲ್ಲಾಗಿ ಬಿದ್ದು, ಕಂಡವರ ಕಡೆಯಿಂದ ತುಳಿಸಿಕೊಳ್ಳಲಿಲ್ಲವೇ? ಬ್ರಾಹ್ಮಣರೇ, ಬಡಿವಾರದ ಮಾತು ಆಡಲಿಕ್ಕೆ ಎಲ್ಲರಿಗೂ ಬರುತ್ತದೆ. ನಮಗೆ ಸಂಧಾನಹಚ್ಚಿ, ನಮ್ಮ ಸಮಾಗಮಸುಖವು ಲಭಿಸಬೇಕೆಂದು ಮನೆಮಾರುಗಳನ್ನು ನಮ್ಮ ಕಾಲಿಗೊಪ್ಪಿಸಿ, ಕೈಕಟ್ಟಿಕೊಂಡು ಎಷ್ಟೋ ಗಂಡಸರು ನಮ್ಮ ಬಾಗಿಲಲ್ಲಿ ನಿಂತಿದ್ದಾರೆ; ನಾವು ಅವರನ್ನು ಕಣ್ಣೆತ್ತಿ ಸಹ ನೋಡಿಲ್ಲ.

ಆದರೆ ತಮ್ಮಂಥ ಸತ್ಪಾತ್ರರಿಗೇ ದೇಹದಾನಕೊಡಬೇಕೆಂದು ಮನಸ್ಸು ಹಾತೊರೆದು ಹೇಳಿಕೊಂಡರೆ, ಅದರಿಂದ ತಮಗೆ ಕರುಣೆ ಬರಲೊಲ್ಲದು. ಹ್ಯಾಗೇಇರಲಿ. ಮಂತ್ರಿವರ್ಯರ ಆಜ್ಞೆಯಂತೆ ತಮ್ಮ ಸೇವೆಮಾಡುವದು ನಮ್ಮ ಕರ್ತವ್ಯವಾಗಿದೆ.

ಶುಕ—ಶಾಬಾಸ್, ತಾಯೀ ಶಾಬಾಸ್! ಸತ್ಪುರುಷರನ್ನು ಭ್ರಷ್ಟರನ್ನಾಗಿ ಮಾಡುವ ನಿಮ್ಮ ಸ್ತ್ರೀಜಾತಿಯು ಮಾತ್ರ ಒಳ್ಳೇದು. ನಿಮ್ಮ ಮರ್ಕಟಚೇಷ್ಟೆಗಳಿಗೆ ಮೋಹಿತರಾಗಿ ನಿತ್ಯಾನಂದಕ್ಕೆ ಹೊರತಾದ ನಿಮ್ಮ ಅಬಲೆತನವನ್ನು ಸಬಲವನ್ನಾಗಿ ಮಾಡುವ ಪುರುಷಜಾತಿ ಮಾತ್ರ ಕೆಟ್ಟದ್ದು. ನಾವು ಹೇಗೇ ಇರಲೊಲ್ಲವೇಕೆ, ನಮ್ಮಗೊಡವೆ ನಿಮಗೇಕೆ? ನಮ್ಮ ನಿಮ್ಮ ಶರೀರಗಳಲ್ಲಿ ಅಂತರವಿರುವದೆನ್ನಬೇಕೇ, ಎಷ್ಟೆಷ್ಟೂ ಇಲ್ಲ. ಯಾವಪದಾರ್ಥಗಳಿಂದ ನಿಮ್ಮದೇಹವುಉಂಟಾಗಿರುವದೋ ಅವೇ ಪದಾರ್ಥಗಳಿಂದ ನಮ್ಮದೂ ಉಂಟಾಗಿದೆ. ಕವಿಗಳ ಕೈಕಾಲುಬಿದ್ದು ಹೇಳಿಕೊಂಡು, ಇಲ್ಲವೆ ನಿಮ್ಮಸ್ವಾಧೀನದಲ್ಲಿ ಸಿಕ್ಕ ಹಸಿಬಿಸಿ ಪಂಡಿತರನ್ನು ಮೆಚ್ಚಿಸಿ, ನಿಮ್ಮ ಅವಯವಗಳನ್ನು ಹೊಗಳಿಸಿಕೊಂಡಮಾತ್ರಕ್ಕೆ ಅವು ಪವಿತ್ರವಾಗಬಲ್ಲವೇ! ಇದೊತ್ತಟ್ಟಗಿರಲಿ. ನಿಮ್ಮ ಆಲಿಂಗನದಿಂದ ನನಗೆ ಸ್ವರ್ಗಸುಖವು ದೊರೆಯಬೇಕೆಂದು ನೀವು ಪ್ರಯತ್ನಮಾಡುತ್ತಿದ್ದರೆ, ಅದು ನಿರರ್ಥಕವಾದದ್ದೇ! ಯಾಕಂದರೆಚರ್ಮವೆಂಬ ಇಂದ್ರಿಯವು ನನ್ನದಿರುವದರಿಂದ ತದ್ದ್ವಾರವಾಗಿ ಸಿಗುವ ಸೌಖ್ಯವನ್ನು ಅನುಭವಿಸುವದೂ ಬಿಡುವದೂ ನನ್ನ ಅಧೀನಕ್ಕೊಳಪಟ್ಟದ್ದು. ನನ್ನ ಸುಖಕ್ಕಾಗಿ ನೀವು ದಣಕೊಳ್ಳುವದೆಂದರೆ ತೀರ ಅನ್ಯಾಯವು. ಇನ್ನು ನಿಮ್ಮೆಲ್ಲರಿಗೆ ಸುಖವಾಗಲೆಂಬ ಪರೋಪಕಾರಬುದ್ಧಿಯಿಂದ ನಾನು ನಿಮ್ಮೊಡನೆ ವಿಹಾರಮಾಡಬೇಕೆಂದು ಎಣಿಸಿದರೆ, ಅದೂ ಅನ್ಯಾಯವೇಸರಿ. ಯಾಕಂದರೆ ನಿಮ್ಮಸುಖಕ್ಕಾಗಿ ನಾನು ದುಃಖಭೋಗಿಸುವದು ಎಲ್ಲಿಯ ನ್ಯಾಯವು? ಲೌಕಿಕರಾದ ನೀವು ಪ್ರತ್ಯುಪಕಾರದ ಆಶೆಯಿಂದ ಪರೋಪಕಾರಮಾಡಿ, ಸ್ವಾರ್ಥವನ್ನು ಬಚ್ಚಿಟ್ಟು, ಪರಾರ್ಥವನ್ನು ಮುಂದೆಮಾಡುವ ರೂಢಿಯು ನಿಮಗೆ ಮೈಯ್ಯುಂಡುಹೋಗಿದೆ. ನಿಮ್ಮ ಪರೋಪಕಾರವು ನಿಜವಾಗಿ ಪರನಾಶವೇ ಇರುತ್ತದೆ. ಬೆಸ್ತನು ತನ್ನ ಗಾಳಕ್ಕೆ ಸವರಿದ ಅನ್ನವು ಮೀನುಗಳಿಗೆ ಮಾಡಿದ ಪರೋಪಕಾರವೆಂದು ತಿಳಿದರೆ, ಅದರಪ್ರತ್ಯುಪಕಾರಕ್ಕಾಗಿ ಅವನು ಗಾಳಕ್ಕೆ ಸಿಕ್ಕ ಮೀನುಗಳ ಜೀವವನ್ನು ತೆಗೆದುಕೊಳ್ಳುತ್ತಾನಷ್ಟೇ. ಇದರಲ್ಲಿ ಬೆಸ್ತನಿಗೂ ಪರೋಪಕಾರಿಯೆಂದು ಭಾವಿಸಿದರೆ, ನೀವೂ ಪತಿವ್ರತೆಯರೆಂದು ಯಾಕೆ ತಿಳಕೊಳ್ಳಬಾರದು! ಪರೋಪಕಾರಬುದ್ಧಿಯಿಂದ ಒಂದುವೇಳೆ ನಿಮ್ಮ ಸಮಾಗಮಸುಖವನ್ನು ನಾನು ಹೊಂದಿದರೆ, ಅದರಿಂದ ನಿಮಗಾಗುವ ಆನಂದವನ್ನು ನಾನು ಹೇಗೆ ತಿಳಕೊಳ್ಳಬೇಕು? ನಿಮಗೆ ಸುಖವಾದದ್ದೇ ಜ್ಞಾನವಾಗದಿದ್ದರೆ ನನ್ನಿಂದ ನಿಮಗೆ ಪರೋ

ಪಕಾರ ಘಟಿಸಿತೆಂದು ನಾನು ಹ್ಯಾಗೆ ನಿಶ್ಚಯಿಸಬೇಕು? ಆದರಿಂದ ಹೆಂಗಳೆಯರೇ, ನೀವು ವ್ಯರ್ಥವಾಗಿ ನನ್ನಂಗಸಂಗದ ಸೌಖ್ಯವನ್ನು ಬಯಸಿ ದಣಕೊಳ್ಳಬೇಡಿರಿ. ನೀವು ಸಾಯುವತನಕ ಶ್ರಮಬಟ್ಟರೂ ನನ್ನ ಮನಸ್ಸು ವಿಕಾರವಾಗಲರಿಯದು. ನನ್ನ ಮನೋನಿಗ್ರಹವೇ ಅಷ್ಟೆಂದು ನಿಶ್ಚಯಿದ್ದಮೇಲೆ, ನಿಮ್ಮಮೇಲೆ ನಾನು ಪ್ರೇಮ ವನ್ನೂ ಮಾಡಲಾರೆನು; ಕೋಪವನ್ನೂ ತಾಳಲಾರೆನು. ಸಾಂಪ್ರತಕ್ಕೆ ನಾನು ಈ ಅರಮನೆಯಲ್ಲಿದ್ದದರಿಂದ ನನ್ನ ದೇಹವು ಮಾತ್ರ ನಿಮ್ಮ ಸ್ವಾಧೀನದಲ್ಲಿದ್ದಂತೆ ಕಂಡರೂ, ಮನಸ್ಸು ನನ್ನ ಅಧೀನದಲ್ಲುಂಟೆಂಬದನ್ನು ಮರೆಯಬೇಡಿರಿ.

ಶುಕಮುನಿಯ ಖಂಡಿತವಾದ ಈ ಮಾತುಗಳನ್ನು ಕೇಳಿ ಆ ಸ್ತ್ರೀಯರು ಬಹು ಖಿನ್ನರಾದರು. ಆದರೂ ಇನ್ನೊಮ್ಮೆ ಪ್ರಯತ್ನಮಾಡಿನೋಡೋಣವೆಂದು ಬಗೆದು, ಅವರು ಆ ಜಲಮಂದಿರದ ಒಂದು ರಮಣೀಯವಾದ ಸ್ಥಳದಲ್ಲಿ ಆದೇ ಹರಿದು ತಂದ ಮಲ್ಲಿಗೆಯ ಮೃದುವಾದ ಕುಸುಮ ಶಯ್ಯೆಯನ್ನು ಹಾಸಿಟ್ಟರು; ಅದರಮೇಲೆ ಮಲ್ಲಿಗೆಯ ಪನ್ನೀರಿನಲ್ಲಿ ತೋಯಿಸಿದ ಮಂಜಿನಂಥ ಅತಿ ಸೂಕ್ಷ್ಮವಾದ ಬಿಳೀ ವಸ್ತ್ರವನ್ನು ಹಾಸಿದರು; ಹಲವು ಜನ ಕುಶಲ ಕನ್ನಿಕೆಯರು ಸುಸ್ವರದಿಂದ ರಾಗ ಮಾಲಿಕೆಯ ಸುನಾದದಲ್ಲಿ ಶ್ರುತಿಗೊಳಿಸಿ ಹಾಡಹತ್ತಿದರು. ಇಷ್ಟೆಲ್ಲ ಸೌರಣಿಯಾದ ಬಳಿಕ ಆವರು ಹಾಸಿಗೆಯನ್ನು ಅಲಂಕರಿಸಲಿಕ್ಕೆ ಶುಕಾಚಾರ್ಯರನ್ನು ಕರೆದರು. ಆ ರಮ್ಯ-ಸುವಾಸಿಕ-ಶಯ್ಯೆಯನ್ನುನೋಡಿ ಶುಕರು ಏನೂ ಮಾತಾಡಲಿಲ್ಲ. ಅಗ ಆ ವೇಶ್ಯೆಯರು,—ಸ್ವಾಮಿಾ ಮಹಾತ್ಮರೇ, ತಮ್ಮಂಥ ಮಹನೀಯರು ನಮ್ಮ ಮಂದಿ ರಕ್ಕೆ ಬರುವದೇ ದುರ್ಲಭವು. ಬಂದರೂ ತಮ್ಮ ಯೋಗ್ಯತೆಗೆ ತಕ್ಕಂತೆ ಆದರಸತ್ಕಾರ ಮಾಡುವದು ಅದಕ್ಕೂ ದುರ್ಲಭವು. ತಮಗೆ ನಾವು ನಮ್ಮ ಆತ್ಮವನ್ನೇ ಸಮರ್ಪಿಸ ಲಿಕ್ಕೆ ಸಿದ್ಧರಿದ್ದೇವೆ; ತಮ್ಮಂಥ ಪುರುಷರು ನಮ್ಮನ್ನು ಹೀಗೆ ನಿರಾಕರಿಸಿದರೆ ನಮ್ಮ ಅವ ಸ್ಥೆ ಏನಾಗಬೇಕು. ನಿಮ್ಮ ಸೌಜನ್ಯದ ಮುಂದೆ ನಮ್ಮ ಕೃತಾಪರಾಧಗಳು ಏನೂ ಕೆಲಸಮಾಡಲಾರವು. ದಯವಿಟ್ಟು ನಮ್ಮ ಮಾತನ್ನು ನಡೆಸಿ ಪುಷ್ಪಶಯ್ಯೆಗೆ ಬರ ಬೇಕು; ಎಂದು ಹೇಳಿದರು. ಆದರೂ ನಮ್ಮ ಮೂಕನಾಯಕರು ಅವರ ಮಾತನ್ನು ಕಿವಿ ಯಲ್ಲಿ ಹಾಕಿಕೊಳ್ಳದೆ, ಸಾಯಂಕಾಲವಾದುದರಿಂದ ಸಾಯಂಸಂಧ್ಯೋಪಾಸನೆ ಗಾಗಿ ಪುಷ್ಕರಣಿಯ ಕಡೆಗೆ ಹೊರಟು ಹೋದರು. ಅಲ್ಲಿ ಅವರು ಕೈಕಾಲು ತೊಳೆದು ಮುಖಪ್ರಕ್ಷಾಲನ ಮಾಡಿಕೊಂಡು, ಬಗಲೊಳಗಿನ ದರ್ಭಾಸನವನ್ನು ಬಿಚ್ಚಿ ಹಾಸುಗಲ್ಲಿನಮೇಲೆ ಹರವಿ, ಸಂಧ್ಯಾವಂದನೆಗೆ ಆರಂಭಿಸಿದರು. ಇದನ್ನೆ ಲ್ಲ ಆ ತರುಣಿಯರು ಕಣ್ಮುಟ್ಟನೋಡಿ, ರೋಷಾವೇಶದಿಂದ ಶುಕರಿಗೆ,—ಬ್ರಾಹ್ಮ ಣಾ, ನೀನು ಬಹು ನಿರ್ದಯನೂ ನಿಷ್ಠುರನೂ ಗರ್ವಿಷ್ಠನೂ ಇರುತ್ತೀ. ನಾನಾ

ಪರಿಯಿಂದ ನಿನಗೆ ಹೇಳಿಕೊಂಡರೆ ಸ್ವಲ್ಪವಾದರೂ ನಿನಗೆ ನಮ್ಮ ಕರುಣೆ ಬರಲಿಲ್ಲ. ನೀನು ಇಂಥ ಕಠಿಣಹೃದಯನೂ, ಕಠೋರಮನಸ್ಸಿನವನೂ ಇರುತ್ತೀಯೆಂಬದನ್ನು ಮೊದಲೇ ತಿಳಿದಿದ್ದರೆ ನಾವು ಇಷ್ಟೊಂದು ಮೋಸಹೋಗುತ್ತಿದ್ದಿಲ್ಲ. ಬ್ರಾಹ್ಮಣರು ಸದಯಾಂತಃಕರಣಿಗಳೆಂದು ಹೇಳುತ್ತಿರುತ್ತಾರೆ; ಆದರೆ ಅದೆಲ್ಲ ಸುಳ್ಳೆಂದು ನಿಮ್ಮಂಥ ನಿರ್ಘೃಣಿ ಮನಸ್ಸಿನವರ ಆಚರಣೆಯಿಂದ ನಿಶ್ಚಯವಾಯಿತು. ಇದಕ್ಕಾಗಿಯೇ ಮನ್ಮಥಮಹಾರಾಯನು ಸ್ತ್ರೀಸುಖಕ್ಕೆ ನಿಮ್ಮನ್ನು ಎರವುಮಾಡಿ, ಕೌಪೀನ-ಕಮಂಡಲುಗಳ ಶಿಕ್ಷೆಯನ್ನನುಭವಿಸಬೇಕೆಂದು ದೇಶಾಂತರಕ್ಕೆ ಅಟ್ಟಿರುತ್ತಾನೆ! ಕಾಮಶಾಸನವೇ ಇಷ್ಟೊಂದು ಪ್ರಚಂಡವಾದದ್ದು! ಸಂಸಾರನಿರಿಚ್ಛನೆಂದು ಊಂಬು ಬಡಿಯುವ ಈಬಡಬ್ರಾಹ್ಮಣನಿಗೆ ನಮ್ಮ ಅರಸನಾದ ಜನಕಮಹಾರಾಜನು ಸದುಪದೇಶಮಾಡಿ, ಈತನನ್ನು ಗೃಹಸ್ಥಾಶ್ರಮದಲ್ಲಿ ಸೇರಿಸುವಂತೆ ಕೃಪೆಯನ್ನುಂಟುಮಾಡಬೇಕೆಂದು ಇಷ್ಟದೇವನಾದ ಮಾರಮಹಾರಾಯನನ್ನು ಪೂಜಿಸೋಣ ನಡೆಯಿರಿ, ಎಂದುಹೇಳಿ; ಹೆಂಗಳೆಯರೆಲ್ಲರೂ ಹೊರಟುಹೋದರು.

ಇತ್ತ ಶುಕರು ಸಂಧ್ಯಾವಂದನೆಯನ್ನು ಮುಗಿಸಿಕೊಂಡು ಕೆಲಹೊತ್ತು ಈಶ್ವರಚಿಂತನೆಮಾಡಿ, ಪುಷ್ಕರಣಿಯೊಳಗಿನ ಸ್ವಚ್ಛೋದಕವನ್ನು ತುಸು ಕುಡಿದು, ಕೃಷ್ಣಾಜಿನದಮೇಲೆ ಸ್ವಸ್ಥವಾಗಿ ನಿದ್ರೆಹೋದರು. ಎರಡು ಪ್ರಹರ ಸುಖನಿದ್ರೆಗೈದು ಪಂಚಪಂಚ ಉಷಃಕಾಲಕ್ಕೆ ಎದ್ದು, ಪ್ರಾತರ್ವಿಧಿಗಳನ್ನು ತೀರಿಸಿಕೊಂಡು, ದೇವರ ಧ್ಯಾನಮಾಡುತ್ತ ಪ್ರಶಾಂತ ಮನಸ್ಸಿನಿಂದ ಕುಳಿತರು. ಅಷ್ಟರಲ್ಲಿ ಒಬ್ಬ ರಾಜದೂತನು ಬಂದು —"ಸ್ವಾಮಿ, ಶ್ರೀಮನ್ಮಹಾರಾಜಾಧಿರಾಜ ಜನಕಮಹಾಪ್ರಭುಗಳು ತಮ್ಮ ದರ್ಶನಕ್ಕೆ ಬರುತ್ತಾರೆ." ಎಂದು ಶುಕರಿಗೆ ಹೇಳಿ ಹೊರಟುಹೋದನು. ರಾಜನ ಆಗಮನದ ಸುದ್ದಿಯನ್ನು ಕೇಳಿ ಶುಕರ ಮುಖಮುದ್ರೆಯಲ್ಲಿ ಏನೂ ಹೆಚ್ಚುಕಡಿಮೆ ಆಗಲಿಲ್ಲ; ಇದೇ ಅದರಲ್ಲಿ ಮುಖ್ಯವು.

---

## ೮ ಜನಕಸಂದರ್ಶನ.

ವ್ಯಾಸಪುತ್ರರ ಅಲಭ್ಯ ದರ್ಶನದಲಾಭವು ಇಂದು ತನಗಾಗುವದೆಂಬ ಉಬ್ಬಿನಿಂದ, ಜನಕರಾಜನು ತನ್ನ ನಿತ್ಯಾಹ್ನಿಕಗಳನ್ನು ಮುಗಿಸಿಕೊಂಡು, ತನ್ನ ಕುಲಪುರೋಹಿತರೊಂದಿಗೆ ಶುಕಾಚಾರ್ಯರ ಸನ್ನಿಧಿಗೆ ಬಂದನು. ರಾಜದರ್ಶನವಾಗುತ್ತಲೆ, ಶುಕಾಚಾರ್ಯರು ತಮ್ಮ ಆಸನದಿಂದ ಎದ್ದು, ಅರಸನ ಸ್ವಾಗತಕ್ಕಾಗಿ ಎರಡು-ಹೆಜ್ಜೆ ಮುಂದೆ ಬಂದರು. ಜ್ಞಾನಿಯಾದ ಜನಕರಾಜನಿಗೆ ಇದು ಸೇರಲಿಲ್ಲ. "ಶುಕಮಹಾರಾಜರೆ, ಇದೇನು ಮಾಡಲಾರಂಭಿಸಿದಿರಿ. ತಾವು ಮಹನೀಯರು

ನನ್ನಂಥ ಸೇವಕನಿಗೆ ಆಸನದಿಂದೆದ್ದು ಎದುರಿಗೆ ಬಂದು ಸ್ವಾಗತವೂಡುವದು ತಮಗೆ ಯೋಗ್ಯವಲ್ಲ. ತಾವು ಆಸನದ ಮೇಲೆ ಸ್ವಸ್ಥವಾಗಿ ಕುಳಿತುಕೊಳ್ಳ ಬೇಕು," ಎಂದು ಜನಕನು ಆಚಾರ್ಯರಿಗೆ ಹೇಳಿಕೊಂಡನು. ಆದರೂ ಜನಕ ರಾಯನ ತೇಜಸ್ಸು ಶುಕಮುನಿಗಳಲ್ಲಿ ಪೂಜ್ಯಭಾವವನ್ನುಂಟುಮಾಡದೆ ಬಿಡಲಿಲ್ಲ. ಕೂಡಲೆ ಶುಕರು ಒಂದೆರಡು ಅಡಿಮುಂದಕ್ಕೆ ಬಂದು, ಇನ್ನು ರಾಜನನ್ನು ಕೈಹಿಡಿದು ಕರೆದೊಯ್ದು ತಮ್ಮ ಆಸನದಲ್ಲಿ ಕುಳ್ಳಿರಿಸತಕ್ಕವರೇ. ಆದರೆ ರಾಜನು ಅಷ್ಟರಲ್ಲಿ ತ್ವರೆಮಾಡಿ ಶುಕಾಚಾರ್ಯರ ಚರಣಾರವಿಂದದಲ್ಲಿ ತನ್ನ ತಲೆಯನ್ನಿಟ್ಟನು. ಶುಕ ರಿಗೆ ಇದು ಬಹು ಅಸಮಾಧಾನವಾಯಿತು. ತನ್ನಂಥ ಅಲ್ಪಜ್ಞನೂ, ಅಲ್ಪವಯ ಸ್ಕನೂ ಆದವ್ಯಾಸಪುತ್ರನಿಗೆ, ಜೀವನ್ಮುಕ್ತನಾದ ಸತ್ಪುರುಷನು-ಮಿಥಿಲಾನಾಥನು- ನಮಸ್ಕರಿಸಿದ್ದು ಸಮ್ಮತವಾಗಲಿಲ್ಲ. ಶುಕರ ಈಬಲವನ್ನು ತಿಳಿದು ರಾಜನು:— ಸ್ವಾಮಿಾ ವ್ಯಾಸಪುತ್ರರೇ, ನಾನು ತಮಗೆ ಸಾಷ್ಟಾಂಗವಂದನೆ ಮಾಡಿದ್ದೇ ಯೋಗ್ಯವು; ಯಾಕಂದರೆ, ನೀವು ನನ್ನ ಪರಮಪೂಜ್ಯರಾದ ವ್ಯಾಸಮಹರ್ಷಿಗಳ ಮಕ್ಕಳು. ಗುರುಪುತ್ರರು ಗುರುಗಳೇ ಎಂದು ಭಾವಿಸುವದು ಸಜ್ಜನರ ಶೀಲವಾ ಗಿದೆ. ಇದಿರಲಿ. ಈ ಹೊತ್ತು ತಾವು ನನಗೆ ಅತಿಥಿಗಳು. ಅತಿಥಿಗಳ ಆದರ ಸತ್ಕಾರಮಾಡುವದು ಗೃಹಸ್ಥಾಶ್ರಮಿಗಳಾದ ನಮ್ಮ ಕರ್ತವ್ಯಕರ್ಮವೇ ಆಗಿದೆ. ಮೇಲಾಗಿ ತಾವು ವೇದವೇತ್ತರಾದ ವಿಪ್ರೋತ್ತಮರು. ಸಕಲ ವರ್ಣಗಳಿಗೆ ಬ್ರಾಹ್ಮಣರೇ ಗುರುಗಳು. ಬ್ರಾಹ್ಮಣರ ಪಾದಧೂಳಿಯು ಗೃಹಸ್ಥರ ಪಾಪಗಳನ್ನು ಬಕ್ಕಲಿಡುತ್ತದೆ; ಪವಿತ್ರರನ್ನು ಮಾಡುತ್ತದೆ. ಹೀಗೆ ಯಾವ ಬಗೆಯಿಂದ ನೋಡಿದರೂ ತಮಗೆ ವಂದಿಸುವದು ನನ್ನ ಕೆಲಸವೇ, ಎಂದು ಹೇಳಿದನು. ಅರಸನ ಮಾತಿಗೆ ಶುಕರು ತಲೆದೂಗಿ, ಜನಕರಾಜನ ಮನೋದಯದಂತೆ ಯೋಗ್ಯಾಸನದಲ್ಲಿ ಕುಳಿತುಕೊಂಡು ಆತನಿಂದ ಯಥಾವಿಧಿಯಾಗಿ ಪೂಜಿಸಿ ಕೊಂಡರು.

ಆಗ ಜನಕನು — ಆಚಾರ್ಯರೇ, ಇಂದು ನಾನು ಧನ್ಯನಾದೆನು. ನನಗೆ ಪ್ರತ್ಯಕ್ಷ ವೇದಗಳ ದರ್ಶನವಾದಂತೆಯೇ ಆಗಿದೆ. ತಮ್ಮಂಥ ನಿಸ್ಪೃಹಿ ಗಳ ದರ್ಶನವಾಗುವದೆಂದರೆ ದೊಡ್ಡ ಭಾಗ್ಯವೇ ಸರಿ. ಕಾಮನಾಸಕ್ತರಾದ ಜನರು ಇಚ್ಛಿತ ಪದಾರ್ಥಗಳ ಆಶೆಯಿಂದ ಬರುವದೇ ಬಹಳ. ತಾವು ನಿಷ್ಕಾ ಮರು. ತಾವಾಗಿಯೇ ನನ್ನಲ್ಲಿ ದಯಮಾಡಿಸಿದ್ದು ನನಗೆ ಮತ್ತಿಷ್ಟು ಸಂತೋ ಷವೆನಿಸಿದೆ. ಆಶ್ರಮದಲ್ಲಿ ಗುರುವರ್ಯರು ಶಿಷ್ಯಸ್ತೋಮದೊಡನೆ ಕುಶಲವಾಗಿ ದ್ದಾರೋ? ತಾವು ಆಕಸ್ಮಿಕವಾಗಿ ಇಲ್ಲಿಗೆ ಬಂದ ನಿಮಿತ್ತವೇನು? ಏನೋ ಬಂದು

ವಿಶೇಷಕಾರಣವಿಲ್ಲದೆ ಹೀಗೆ ತಾವು ಬರತಕ್ಕವರಲ್ಲ! ನನ್ನ ಸುಕೃತವೇ ತಮ್ಮನ್ನು ಇಲ್ಲಿಗೆ ಬರಮಾಡಿತೆಂದು ಹೇಳಿದರೆ, ಅದರಿಂದ ನನಗೆ ಅಹಂಕಾರದೋಷತಟ್ಟುತ್ತದೆ. ದಯಮಾಡಿ ಈ ನನ್ನ ಪ್ರಶ್ನಗಳಿಗೆ ಉತ್ತರಕೊಡಬೇಕು, ಎಂದು ಅರಸನು ಹೇಳಿಕೊಳ್ಳಲು, ಆಚಾರ್ಯರು — “ ಜನಕರಾಯನೇ, ಆಶ್ರಮದಲ್ಲಿ ಎಲ್ಲವೂ ಕ್ಷೇಮವೆ ಸರಿ. ನಾನು ಬಂದ ಕಾರಣವು ಬಹು ಮಹತ್ವವಾದದ್ದುಂಟು. ರಾಜೋತ್ತಮಾ, ನಾನು ಬೃಹಸ್ಪತ್ಯಾಚಾರ್ಯರ ಆಶ್ರಮದಲ್ಲಿ ಹನ್ನೆರಡು ವರ್ಷ ಇದ್ದು, ಅವರ ಬಳಿಯಲ್ಲಿ ಸಕಲ ವಿದ್ಯೆಗಳನ್ನು ಕಲಿತೆನು. ಬಳಿಕ ಗುರುಗಳ ಅಪ್ಪಣೆಯಿಂದ ವ್ಯಾಸಾಶ್ರಮಕ್ಕೆ ಮರಳಿ ಬಂದೆನು. ತಂದೆಯು ಸಮ್ಮುಖದಲ್ಲಿ ನಾನು ಕಲಿತದ್ದನ್ನೆಲ್ಲ ಅಂದು ತೋರಿಸಿದೆನು. ನನ್ನ ವಿದ್ಯಾಗ್ರಹಣಕ್ಕೆ ವ್ಯಾಸರು ಸಂತುಷ್ಟರಾದರು. ವ್ಯಾಸಾಶ್ರಮದಲ್ಲಿ ಕೆಲವು ದಿನ ಇರುತ್ತಿರಲು, ದೇವರ ಕೃಪೆಯಿಂದ ವೇದಾಂತಶಾಸ್ತ್ರವನ್ನು ಮನನಮಾಡಿಕೊಳ್ಳುವ ಇಚ್ಛೆಯು ನನಗುಂಟಾಯಿತು. ಬಹುದಿವಸ ಅದರಲ್ಲಿ ಮನಸ್ಸು ಹಾಕಿದೆನು. ಆಗ ನನಗೆ ‘ಈ ಜಗತ್ತು ಸುಳ್ಳು’ ಎಂಬ ಭಾವನೆಯುಂಟಾಯಿತು; ಜಗತ್ತಿನ ಪ್ರತಿಯೊಂದು ಪದಾರ್ಥವು ತುಚ್ಛವೆನಿಸಹತ್ತಿತು; ಜ್ಞಾನರೂಪ ಪರಮಾತ್ಮನು ಎಲ್ಲ ಸೃಷ್ಟಿಯಲ್ಲಿ ಕಾಣಹತ್ತಿದನು. ಇದರಿಂದ ಐಹಿಕಕೃತ್ಯಗಳ ಕಡೆಗೆ ಮನಸ್ಸು ಉದಾಸವಾಯಿತು. ಒಂದುದಿನ ವ್ಯಾಸರು ನನ್ನನ್ನು ಹತ್ತರ ಕರೆದು, ‘ಶುಕಾ, ಎಲ್ಲ ಆಶ್ರಮಗಳಲ್ಲಿ ಗೃಹಸ್ಥಾಶ್ರಮವು ಶ್ರೇಷ್ಠವಾದದ್ದು. ಅದರಿಂದ ನೀನು ಆ ಆಶ್ರಮವನ್ನು ಸ್ವೀಕರಿಸು,’ ಎಂದು ಹೇಳಿದರು. ಅದಕ್ಕೆ ನಾನು — ‘ಗೃಹಸ್ಥಾಶ್ರಮವು ಒಂದು ಬಂಧನವದೆ. ನನ್ನ ಗುರುಗಳಂಥ ಬೃಹಸ್ಪತ್ಯಾಚಾರ್ಯರೂ ಸಹ ಅದರಲ್ಲಿ ಸಿಕ್ಕು ಪರತಂತ್ರರಾಗಿದ್ದಾರೆ. ಕಾರಣ ನಾನು ಗೃಹಸ್ಥಾಶ್ರಮವನ್ನು ಸ್ವೀಕರಿಸಲಾರೆನೆಂದು ಹೇಳಿದೆನು. ನನ್ನ ನಿಕಟವಾದ ನುಡಿಕೇಳಿ ತಂದೆಯು ಬಹುಪರಿಯಿಂದ ನನಗೆ ಬೋಧಿಸಿದರೂ, ನಾನು ಒಪ್ಪಲಿಲ್ಲೆಂದು ಮನಗಂಡು, ಅವರು ನನ್ನನ್ನು ನಿನ್ನ ಕಡೆಗೆ ಕಳಿಸಿದ್ದಾರೆ; ನಿನ್ನ ಸಮಾಗಮದಿಂದ ಸರ್ವಸಂಶಯವೂ ನಿವಾರಣವಾಗುವದೆಂದು ಹೇಳಿರುತ್ತಾರೆ. ಮೊದಮೊದಲು ನಿನ್ನೆಡೆಗೆ ಬರಲಿಕ್ಕೆ ನನ್ನ ಮನಸ್ಸು ಒಲ್ಲದಾಗಿತ್ತು. ವ್ಯಾಸರ ಆಗ್ರಹದ ಮುಂದೆ ನನ್ನ ಆಟ ಸಾಗಲಿಲ್ಲ. ಕೊನೆಗೆ ಒಂದು ದಿವಸ ಇಲ್ಲಿಗೆ ಬರಲು ಹೊರಟೆನು. ಹಾದಿಯಲ್ಲಿ ಬಹುಜನ ಧನ್ಯಪುರುಷರು ಭೆಟ್ಟಿಯಾದರು; ಅವರ ದರ್ಶನದಿಂದ ನನ್ನ ಅಂತಃಕರಣವು ನಿರ್ಮಲವಾಗಿದೆ. ಅನೇಕ ತೀರ್ಥಗಳಲ್ಲಿ ಸ್ನಾನ ಮಾಡಿದೆನು. ಅದರಿಂದ ಮನಸ್ಸಿನ ದೋಷಗಳು ದೂರಾದವು. ಇಂದು ನಿನ್ನ ದರ್ಶನವಾಗಿ ನಾನು

ಪರಮ ಪವಿತ್ರನಾಗಿದ್ದೇನೆ. ದೊರೆಯೇ, ನನಗೆ ಮೋಕ್ಷದ ಇಚ್ಛೆಯಲ್ಲದೆ ಬೇರೆ ಆಶೆಯಿಲ್ಲ. ಸ್ವರ್ಗಲೋಕ, ಪಿತೃಲೋಕ ಮುಂತಾದವುಗಳ ಅಪೇಕ್ಷೆಯು ನನಗಿಲ್ಲ. ನನಗೆ ಆತ್ಮಲೋಕವು ಬೇಕಾಗಿದೆ. ರಾಜೇಂದ್ರಾ, ತಪಶ್ಚರ್ಯ, ತೀರ್ಥ ಸ್ನಾನ, ವ್ರತ, ಯಜ್ಞ, ಅಧ್ಯಯನ, ಕ್ಷೇತ್ರವಾಸ, ಜ್ಞಾನ ಮುಂತಾದ ಸಾಧನಗಳಲ್ಲಿ ಯಾವ ಸಾಧನವನ್ನು ನಾನು ಅವಲಂಬಿಸಲಿ? ದಯಮಾಡಿ ಹೇಳಬೇಕು." ಎಂದರು.

ಜನಕ—ನಾನು ಕ್ಷತ್ರಿಯನು. ಬ್ರಾಹ್ಮಣರಿಗೆ ಉಪದೇಶ ಮಾಡತಕ್ಕ ಅಧಿಕಾರವು ನನ್ನದಲ್ಲ. ಆದರೂ ನನ್ನ ಪೂಜ್ಯರಾದ ಗುರುಗಳು ಪರ್ಯಾಯದಿಂದ ಆ ಕೆಲಸದ ಹೊರೆಯನ್ನು ನನ್ನ ಮೇಲೆ ಹಾಕಿದ್ದರಿಂದ ನನಗೆ ತಿಳಿದಷ್ಟು ಹೇಳು ತ್ತೇನೆ. ಶುಕಾ, ಮೋಕ್ಷಾಪೇಕ್ಷೆಯುಳ್ಳ ಬ್ರಾಹ್ಮಣನು ಮೊದಲು ಶ್ರುತಿ-ಸ್ಮೃತಿ ಗಳಲ್ಲಿ ಹೇಳಿದ ವರ್ಣಾಶ್ರಮ ಧರ್ಮಗಳನ್ನು ಅನುಷ್ಠಿಸಬೇಕು. ಅಂದರೆ, ಉಪ ನಯನವಾದ ಕೂಡಲೆ ಗುರುಕುಲದಲ್ಲಿ ವಾಸಮಾಡಿ ಅಧ್ಯಯನವಮುಗಿಸಿ, ಗುರುಗ ಳಿಗೆ ಯೋಗ್ಯತೆಯು ಮೇರೆಗೆ ಗುರುದಕ್ಷಿಣೆ ಕೊಟ್ಟು, ಸಮಾವರ್ತನ ವಿಧಿಯಾದ ಬಳಿಕ ವಿವಾಹಮಾಡಿಕೊಂಡು ಗೃಹಸ್ಥಾಶ್ರಮನ್ನು ಸ್ವೀಕರಿಸಬೇಕು. ಗೃಹಸ್ಥಾ ಶ್ರಮದಲ್ಲಿರುವ ವರೆಗೆ ನ್ಯಾಯದಿಂದ ಹಣಗಳಿಸಿ, ದೇವರು ಕೊಟ್ಟದ್ದರಲ್ಲಿ ಸಂತೋ ಷಪಟ್ಟು ಸಂಸಾರಸಾಗಿಸಬೇಕು. ಪರಪೀಡೆಯನ್ನು ಮಾಡದೆ ಪುಣ್ಯಸಂಪಾ ದನೆ ಮಾಡಬೇಕು. ಅಗ್ನಿಹೋತ್ರಾದಿ ಆಶ್ರಮ ಕೃತ್ಯಗಳಲ್ಲಿ ಅಂತರ ತರಬಾರದು. ಸತ್ಯಭಾಷಣಮಾಡಬೇಕು. ಮನೋವಾಕ್ಕಾಯಗಳಿಂದ ನಿರ್ಮಲವಿರಬೇಕು. ತ್ರಿಕರಣಪೂರ್ವಕ ಪವಿತ್ರಾಚರಣೆಯನ್ನು ಮಾಡಬೇಕು. ಸುದೈವದಿಂದ ಮಕ್ಕಳು-ಮೊಮ್ಮಕ್ಕಳುಗಳಾದ ಮೇಲೆ ವಾನಪ್ರಸ್ಥಾಶ್ರಮವನ್ನು ಕೈಕೊಂಡು, ಕಾಮ-ಕ್ರೋಧ ಮೊದಲಾದ ಷಡ್ರಿಪುಗಳನ್ನು ಗೆಲ್ಲಬೇಕು. ಮುಂದೆ ಮಕ್ಕಳ ಮೇಲೆ ಮನೆತನವನ್ನೂ ಹೆಂಡತಿಯನ್ನೂ ಒಪ್ಪಿಸಿ, ಪೂರ್ಣವೈರಾಗ್ಯವು ಬಂದಿದ್ದರೆ ಸನ್ಯಾಸಾಶ್ರಮವನ್ನು ಹಿಡಿಯಬೇಕು. ಸುಮ್ಮನೆ ಜುಟ್ಟಜನಿವಾರಗಳನ್ನು ಕಿತ್ತೊ ಗೆದು, ತಲೆಬೋಳಿಸಿಕೊಂಡು ಕಾವೀಶಾಟಿಯನ್ನು ಹೊತ್ತಾಕ್ಷಣಕ್ಕೆ, ಸನ್ಯಾಸಿಯಾಗ ಲಾರನು. ಸನ್ಯಾಸವು ಸುಲಭವಲ್ಲ. ಪೂರ್ಣವಿರಕ್ತಿಯುಳ್ಳವನೇ ಅದಕ್ಕೆ ಅಧಿ ಕಾರಿಯು. ಆಚಾರ್ಯಪುತ್ರಾ, ವೇದಗಳಲ್ಲಿ ಹೇಳಿದ ನಾಲ್ವತ್ತೆಂಟು ಸಂಸ್ಕಾರ ಗಳನ್ನು ಅನುಷ್ಠಿಸದಂಥ ಯಾವ ಪ್ರಾಣಿಯೂ ಮೋಕ್ಷಕ್ಕೆ ಪಾತ್ರವಾಗಲಾರನು. ಅವುಗಳಲ್ಲಿ ಗರ್ಭಾದಾನಾದಿ ನಾಲ್ವತ್ತು ಸಂಸ್ಕಾರಗಳು ಗೃಹಸ್ಥಾಶ್ರಮಿಗಳಿಗೂ, ಮಿಕ್ಕ ಎಂಟು ಶಮ-ದಮ ಮುಂತಾದವುಗಳು ಯತಿಗಳಿಗೂ ಸಂಬಂಧಿಸಿರುವವು. ದ್ವಿಜ ಕುಲದಲ್ಲಿ ಈ ಎಲ್ಲ ಸಂಸ್ಕಾರಗಳು ಅನಾಯಾಸವಾಗಿ ಆಗಿಹೋಗುತ್ತಿರುವದರಿಂದ,

ಯಥಾಕ್ರಮದಿಂದ ಆಶ್ರಮದಿಂದ ಆಶ್ರಮಕ್ಕೆ ಹೋಗಬೇಕು. ನಡುವಿನ ಆಶ್ರಮಗಳನ್ನು ಉಲ್ಲಂಘಿಸಕೂಡದೆಂದು ಶಾಸ್ತ್ರಾಜ್ಞೆಯೂ ಶಿಷ್ಟೋಕ್ತಿಯೂ ಇರುವವು. ಆದದರಿಂದ ಹಿರಿಯರ ಅಪ್ಪಣೆಯಂತೆ ಗೃಹಸ್ಥಾಶ್ರಮವನ್ನು ಸ್ವೀಕರಿಸು.

ತಾತನ ಪಕ್ಷವನ್ನು ಹಿಡಿದು ಜನಕರಾಯನಾದರೂ ಅವರಂತೆಯೇ ಹೇಳುತ್ತಾನೆಂದು ತಿಳಿದು, ಶುಕಾಚಾರ್ಯರು ತುಸು ಖಿನ್ನರಾಗಿ, ಮನಸ್ಸಿನಲ್ಲಿ —ಇವನಿಂದಲೂ ತನ್ನ ಸಮಾಧಾನವಾಗುವದಿಲ್ಲ. ಆದರೂ ನನ್ನ ಸಂಶಯಗಳನ್ನು ಇವನ ಮುಂದಿಡೋಣ ,ಎಂದು ಆಲೋಚಿಸಿ,

ಶುಕ—ರಾಜಾ, ಕ್ರಮತಪ್ಪದೆ ಆಶ್ರಮದಿಂದ ಆಶ್ರಮಕ್ಕೆ ಹೋಗಬೇಕೆಂದು ಶಾಸ್ತ್ರದಲ್ಲಿ ಸರ್ವಸಾಧಾರಣ ನಿಯಮ ಹೇಳಿರಬಹುದು. ಅದಕ್ಕೆ ಅಪವಾದಗಳು ಇಲ್ಲೇ ಇಲ್ಲವೇನು? ಪೂರ್ವಪುಣ್ಯದಿಂದ ಯಾವನಾದರೂ ಬ್ರಹ್ಮಚಾರಿಯು ಅಧ್ಯಯನಬಲದಿಂದ ತೀವ್ರ ವೈರಾಗ್ಯ ಸಂಪಾದಿಸಿದರೆ, ಇಲ್ಲವೆ, ಅಪರೋಕ್ಷ ಜ್ಞಾನಿಯಾದರೆ, ಆತನು ಗೃಹಸ್ಥಾಶ್ರಮದಲ್ಲಿ ಯಾಕೆ ಬರಬೇಕು? ನಿಮ್ಮ ಹಾಗು ಶಾಸ್ತ್ರಗಳ ಹೇಳಿಕೆಯಂತೆ ಅಂಥವನೂ ಗೃಹಸ್ಥಾಶ್ರಮಿಯಾಗಲೇಬೇಕೆಂದು ಹೇಳಿದರೆ, ವಿರಕ್ತಪುರುಷನ ಮೇಲೆ ಸುಮ್ಮಸುಮ್ಮನೆ ಒಂದು ಭಾರವನ್ನು ಹೊರಿಸಿದಂತೆ ಆಗುವದಿಲ್ಲವೆ? ಇಚ್ಛೆಯ ವಿರುದ್ಧ ಒಬ್ಬರಮೇಲೆ ಹೊರೆ ಹೊರಿಸುವದು ಅನ್ಯಾಯವಲ್ಲದೆ ಮತ್ತೇನು?

ಜನಕ—ಸೈ ಸೈ, ಶುಕಮುನಿಯೆ, ನಿನ್ನ ಮಾತು ಮೊದಮೊದಲು ಸರಿಗಂಡೀತು. ಮುಂದೆ ಮಾತ್ರ ಸ್ಥಿರವಾಗಿ ನಿಲ್ಲಲಿಕ್ಕಿಲ್ಲ. ಯಾಕೆಂದರೆ ನಮ್ಮ ಅಧ್ಯಯನದ ಪ್ರಭಾವವೇ ಅವರ್ಣನೀಯವಾದದ್ದದೆ. ಅದರಿಂದ ಬ್ರಹ್ಮಚಾರಿಯ ವೃತ್ತಿಯು ನಿರ್ಮಲವಾಗುವದೇನೋ ಸತ್ಯವು; ಚಿತ್ತನಿರ್ಮಲವಾದ ಮೇಲೆ ಪರೋಕ್ಷಜ್ಞಾನವಾಗುವದೂ ಆಶ್ಚರ್ಯವಲ್ಲ. ಆದರೆ ಮುನಿಕುಮಾರಾ, ಈ ದುಷ್ಟ ಇಂದ್ರಿಯಗಳು ಪೂರ್ವವಾಸನೆಯ ಬಲವತ್ತರದಿಂದ ಅವನನ್ನು ದುರ್ಮಾರ್ಗಕ್ಕೆ ಒಯ್ಯದೆ ಬಿಡವು. ಆಕಳ ಇಚ್ಛೆಯಿಲ್ಲದಿದ್ದರೂ ಎಳೆದೊಯ್ದು ಅದನ್ನು ಡಾವಣಿಗೆ ಬಿಗಿಯುವ ಕಟುಗನಂತೆ, ಆ ಎಳೆ ಮನಸ್ಸಿನ ವಟುವನ್ನು ಈ ಬಲಾಢ್ಯವಾದ ಇಂದ್ರಿಯಗಳು ವಿಷಯಸುಖವೆಂಬ ಕಟ್ಟಡವಿಗೆ ಎಳೆದೊಯ್ಯುವವು. ಮನೋನಿಗ್ರಹಮಾಡುವದು ಸುಲಭಸಾಧ್ಯವಲ್ಲ. ಸಾವಿರಾರು ಜನರಲ್ಲಿ ಒಬ್ಬ ಜಿತೇಂದ್ರಿಯನಾದರೂ ದೊರಕುವದು ವಿರಳ. ಮಹಾರಾಯಾ, ಇಂದ್ರಿಯ ಸಮೂಹಗಳು ಅಂತಃಕರಣದಲ್ಲಿ ಅಸಂಖ್ಯವಿಕಾರಗಳನ್ನು ಹುಟ್ಟಿಸಿ ಪ್ರಾಣಿಗಳನ್ನು ತಮ್ಮ ಆಧೀನಮಾಡಿಕೊಂಡು ಗತಿಗೆಡಿಸುವವು. ಮೊದಲು ಮಿಷ್ಟಾನ್ನಬೇಕು,ಮುಂದೆ

ಮೆತ್ತನ್ನ ಹಾಸಿಗೆ ಬೇಕು; ಇವಾದ ಮೇಲೆ ಚೆಲುವೆಯಾದ ಸ್ತ್ರೀಯು ಬೇಕು. ಅಲ್ಲಿಂದ ಮಕ್ಕಳು ಬೇಕು. ಹೀಗೆ ಇಂದ್ರಿಯಗಳ ಸುಖದ ವ್ಯಾಪ್ತಿಯು ಬೆಳೆಯುತ್ತಲೇ ಹೋಗುವದು. ತಾರುಣ್ಯಾವಸ್ಥೆಯಲ್ಲಿ ಬಹುಶಃ ಪ್ರಾಣಿಗಳಿಗೆಲ್ಲ ಹೀಗೆ ಅನ್ನಿಸುವದು ಸಹಜವೇ. ಈ ಇಚ್ಛೆಯು ಮೆಲ್ಲಮೆಲ್ಲಗೆ ಕಡಿಮೆಯಾಗುತ್ತ ಹೋಗಿ ಕಟ್ಟಕಡೆಗೆ ಪೂರಾ ನಿವಾರಣವಾಗಲಿಕ್ಕೆ ಬರಬೇಕೆಂತಲೇ ಗೃಹಸ್ಥಾಶ್ರಮದಂಥ ಅತ್ಯುತ್ತಮ ವ್ಯವಸ್ಥೆಯನ್ನು ಪೂರ್ವಜರು ಮಾಡಿರುವರು. ಶುಕಾ, ವಿದ್ಯಾರ್ಥಿಯಿರುವಾಗ ಬಂದ ವೈರಾಗ್ಯವು ತೀರ ಅಪಕ್ವವಿರುವದು. ಮುಂದೆ ಅದು ಕಡೆತನಕ ತಡೆದು ನಿಲ್ಲುವದಿಲ್ಲ. ಕೇವಲ ನಿನ್ನ ಮನಸ್ಸಿನ ಮೇಲೆಯೇ ವಿಶ್ವಾಸವಿಟ್ಟು ನಡೆಯದೆ ಶ್ರೇಷ್ಠರ ಅನುಭವನೋಡು. ಚಿಕ್ಕಂದಿನಲ್ಲಿ ಜಗತ್ತಿನ ಅನುಭವವು ಅಷ್ಟಿರುವದಿಲ್ಲ. ಬರಬರುತ್ತ ಅನುಭವಜ್ಞಾನವು ಬೆಳೆದು, ಮನೋವ್ಯಾಪಾರವೂ ಮನೋವಿಕಾರವೂ ಬೆಳೆಯುವವು. ಸನ್ಯಾಸಾಶ್ರಮವು ನಿಶ್ಚಯವಾಗಿ ಅತಿಕಷ್ಟಕರವಾದದ್ದುಂಟು. ಮೇಲಾಗಿ ಅತಿಮಹತ್ವವಾದದ್ದೂ ಉಂಟು. ಈ ಆಶ್ರಮದಲ್ಲಿ ಒಮ್ಮೆ ವಿಷಯ ವಾಸನೆಗೆ ಬಲಿಬಿದ್ದರೆ, ಈ ಲೋಕದಲ್ಲಿ ಅಪಕೀರ್ತಿಯೂ ಪರಲೋಕದಲ್ಲಿ ಅಧಃಪಾತವೂ ತಪ್ಪುವದಿಲ್ಲ. ಆದಕಾರಣ ಒಂದು ಆಶ್ರಮದಿಂದ ಮತ್ತೊಂದಾಶ್ರಮಕ್ಕೆ ಕ್ರಮದಿಂದಲೇ ಹೋಗತಕ್ಕದ್ದು.

ಶುಕ—ಮಹಾರಾಜನೆ, ವಾಸನಾ-ಸಮೂಹವನ್ನು ನಾಶಮಾಡುವದು ಪ್ರಯತ್ನದಿಂದ ಸಾಧ್ಯವಿಲ್ಲೇನು?

ಜನಕ—ವಾಸನೆಗಳನ್ನು ನಾಶಗೊಳಿಸುವದು ಅತಿದುರ್ಘಟವದೆ. ದೊಡ್ಡದೊಡ್ಡ ಋಷಿಗಳಿಗೆ ಸಹ ಅದು ಸಾಧ್ಯವಾಗಿಲ್ಲ. ಆದ್ದರಿಂದ ಕ್ರಮಕ್ರಮವಾಗಿಯೇ ವಾಸನೆಗಳನ್ನು ಕ್ಷಯಿಸಬೇಕೆಂದು ನಮ್ಮ ಈಶ್ವರಸ್ವರೂಪರಾದ ಮಹಾತ್ಮರು, ನಾಲ್ಕು ಆಶ್ರಮಗಳನ್ನುಗೊತ್ತುಮಾಡಿದ್ದಾರೆ.

ಶುಕ—ನಾಲ್ಕೂ ಆಶ್ರಮಗಳನ್ನು ಕ್ರಮದಿಂದ ಸ್ವೀಕರಿಸಿದರೆ ಮನೋವಾಸನೆಗಳು ಸಮೂಲ ನಷ್ಟವಾಗುತ್ತವೆಂದು ಹ್ಯಾಗೆ ಹೇಳಬೇಕು? ಬಲಿಷ್ಠವಾದ ವಾಸನೆಯು ಉಳದೇ ಉಳಿಯುವದಲ್ಲವೆ?

ಜನಕ—ಮುನಿಪುತ್ರಾ, ನಿನ್ನ ಮಾತೂ ಸುಳ್ಳಲ್ಲ. ಆದರೆ ಎತ್ತರದ ಮೇಲೆ ಮಲಗುವವನಿಗೆ ಕೆಳಗೆ ಬೀಳುವ ಹೆದರಿಕೆಯು ಹೆಚ್ಚಿಗಿದ್ದಂತೆ, ನೆಲದಮೇಲೆ ಮಲಗಿದವನಿಗೆ ಅಷ್ಟೊಂದು ಭಯವಿರುವದಿಲ್ಲ. ಇದೇಮೇರೆಗೆ ಆಶ್ರಮಕ್ರಮದಿಂದ ನಡೆದವರ ಮಾತಾದರೂ ಇರುತ್ತದೆ. ಇರುವೆಯು ಮೆಲ್ಲಮೆಲ್ಲಗೆ ಮರದಮೇಲೇರಿ ಆದರ ಫಲಗಳನ್ನು ಸಂಪೂರ್ಣವಾಗಿ ಸವಿಯುತ್ತದೆ. ಆದೇ ಹಕ್ಕಿಗಳು ದೂರಿಂದಲೇ

ಹಣ್ಣುನೋಡಿ, ಗಕ್ಕನೆ ಓಡಿಬಂದು, ಹಣ್ಣನ್ನು ಬತ್ತರದಿಂದ ತಿನ್ನಲಾರಂಭಿಸಲು ಹಣ್ಣೇ ಉದರಿಕೆಳಗೆ ಬೀಳುತ್ತದೆ; ನಡುವೆ ಏನಾದರೊಂದು ವಿಘ್ನಬಂದರಂತೂ ತೀರೇಹೋಯಿತು. ಇತ್ತ ಹಣ್ಣೂ ಇಲ್ಲ, ಅತ್ತ ಶ್ರಮವೂ ತಪ್ಪಲಿಲ್ಲ; ಹೀಗಾಗುವದು ಸಹಜವು. ಗೃಹಸ್ಥಾಶ್ರಮಿಯು ಆಶ್ರಮೋಕ್ತ ಕೃತ್ಯಗಳನ್ನು ಮಾಡಲಿಕ್ಕೆ ತಪ್ಪಿದರೆ, ಪ್ರಾಯಶ್ಚಿತ್ತದಿಂದ ಶುದ್ಧನಾಗಬಹುದು. ಸನ್ಯಾಸಿಗೆ ಅದೂ ಇಲ್ಲ. ಪುಣ್ಯಶಾಲಿಯು ಸಹ ಮನಸ್ಸನ್ನು ಗೆಲ್ಲಲಾರನು! ಗೆದ್ದರೂ ಅದನ್ನು ಸತತವಾಗಿ ಸ್ವಾಧೀನದಲ್ಲಿರಿಸುವದು ಅವನಿಂದಾಗುವದಿಲ್ಲ. ಆದದರಿಂದ ಗಡಿಬಿಡಿಯನ್ನು ಮಾಡದೆ ಯುಕ್ತಿ-ಪ್ರಯುಕ್ತಿಗಳಿಂದ ಮನಸ್ಸನ್ನು ತಡೆಯುವ ರೂಢಿಮಾಡುವದೇ ಮೇಲು. ಇನ್ನು ಗೃಹಸ್ಥಾಶ್ರಮವಾದರೂ ಸುಲಭಸಾಧ್ಯವೆನ್ನಬೇಕೇ? ಅದೂ ಇಲ್ಲ. ಅದರಲ್ಲಿ ಶಾಂತವಾಗಿರಬೇಕು; ಈಶ್ವರಾರಾಧನವನ್ನು ಭಕ್ತಿಪೂರ್ವಕ ಮಾಡಬೇಕು; ಲಾಭದಿಂದ ಆನಂದವನ್ನೂ, ಹಾನಿಯಿಂದ ದುಃಖವನ್ನೂ ಪಡಬಾರದು; ಆತ್ಮಜ್ಞಾನವನ್ನು ದೊರಕಿಸುವದೇ ಗೃಹಸ್ಥಾಶ್ರಮದ ಮುಖ್ಯ ಉದ್ದೇಶವೆಂದು ತಿಳಿಯಬೇಕು; ಅದಕ್ಕೆ ತಕ್ಕಂತೆ ದಾನಧರ್ಮ, ಪರೋಪಕಾರ ಮೊದಲಾದವನ್ನು ಶಾಸ್ತ್ರವಿಧಿಯಿಂದ ಮಾಡಬೇಕು. ಹೀಗೆ ಮಾಡಿದರೆ ಗೃಹಸ್ಥಾಶ್ರಮಿಯಾದರೂ ಮುಕ್ತನಾಗುವನು. ಶುಕಮುನಿಯೇ ಈಗ ನನ್ನನ್ನೇ ನೋಡು. ರಾಜ್ಯಕಾರಭಾರದಂಥ ಕಠಿಣ ಕೆಲಸವನ್ನು ಕೈಕೊಂಡಿದ್ದರೂ, ದುಷ್ಟದಂಡನ-ಶಿಷ್ಟಸಂರಕ್ಷಣಗಳನ್ನು ಮಾಡುತ್ತಿದ್ದರೂ, ಮನಸ್ಸಿನಲ್ಲಿ 'ಇದನ್ನು ನಾನೇ ಮಾಡಿದೆನು, ಇದು ನನ್ನದೇ ಅದೆ' ಎಂಬ ಹಮ್ಮು ನನ್ನಲ್ಲಿ ಇಲ್ಲ; ಆದದರಿಂದ ಅದರ ಗಂಧವೂ ನನಗೆ ಸೋಂಕುವದಿಲ್ಲ. ಇಷ್ಟೇಕೆ? ದ್ವಾರಪಾಲಕನು ನಿಮ್ಮನ್ನು ತಡೆದಾಗ ನಿಮಗೇಕೆ ಕೆಡಕೆನಿಸಿತ್ತು? ನನ್ನ ಅಪ್ಪಣೆಯಂತೆ ಆತನು ಅಡ್ಡಿಮಾಡಿದ್ದನು. ನಿಮ್ಮ ಮನಸ್ಸಿನಲ್ಲಿ ಆಗ 'ನಾನು ಶುಕನು, ನಾನು ವಿದ್ವಾಂಸನು.' ಎಂಬ ಅಹಂಕಾರವು ಇದ್ದದ್ದರಿಂದ ನಿಮಗೆ ಸಿಟ್ಟುಬಂದಿತ್ತಲ್ಲವೆ? ಸ್ವಾಮಿ, ಎಲ್ಲಿಯವರೆಗೆ ಅಭಿಮಾನವು ನಷ್ಟವಾಗಿಲ್ಲವೋ, ಅಲ್ಲಿಯತನಕ ನೀವು ಚತುರ್ಥಾಶ್ರಮಕ್ಕೆ ತಕ್ಕವರೇ ಅಲ್ಲ! ಇನ್ನು ಮೂಲದಲ್ಲಿಯೇ ಅಭಿಮಾನವಿಲ್ಲದಿದ್ದರೆ ಅದನ್ನು ಬಿಡುವದು ಹ್ಯಾಗೆ? ಅದಕ್ಕಾಗಿಯೇ ಗೃಹಸ್ಥಾಶ್ರಮದಲ್ಲಿ ಅಭಿಮಾನಮಾಡಲಿಕ್ಕೆ ಮೊದಲಿಗೆ ಕಲಿತು, ಆಮೇಲೆ ಅದನ್ನು ಮೆಲ್ಲಮೆಲ್ಲಗೆ ಬಿಡಲಿಕ್ಕೂ ಕಲಿಯಬೇಕು. ಅಭಿಮಾನವೆಂಬದು ಎಂಥಾದ್ದೋ ಇದು ಸಹ ಅನುಭವವಿಲ್ಲದ ಜ್ಞಾನಲವದುರ್ವಿದಗ್ಧರು, ತಮ್ಮನ್ನು ಕೇಳಬಂದ ಶಿಷ್ಯರಿಗೆ ಅಭಿಮಾನಬಿಡಿರೆಂದು ಬೋಧಿಸುತ್ತಾರೆ! ನಾವು ಹೆಂಡಿರು-ಮಕ್ಕಳಮೇಲೆ ಅಭಿಮಾನ ಮಾಡುತ್ತೇವೆಂದು ಹೇಳುವದು ಸುಳ್ಳೇ; ಯಾಕಂದರೆ ಹೆಂಡಿರು-ಮಕ್ಕಳಿಗೆ ಸ್ಪರ್ಶಜನ್ಯ

ರೋಗದಂಥ ದುರ್ಘಟ ಪ್ರಸಂಗ ಬಂದಾಗ, ನಾವು ಅವರನ್ನು ಬಿಟ್ಟು ದೂರಿಗೆ ದೂರೇಓಡಿಹೋಗುತ್ತೇವೆ. ಹೊಟ್ಟೆಗೆ ಕೂಳಿಲ್ಲದ ಬರಗಾಲದಂಥ ಬಿಕ್ಕಟ್ಟಿನ ಪ್ರಸಂಗಬಂದಾಗ, ಮಕ್ಕಳನ್ನು ಮಾರಿ ಹೊಟ್ಟೆ ಹೊರಕೊಂಡ ನೀಚಾತ್ಮರು ಎಷ್ಟುಮಂದಿ ಇಲ್ಲ! ಒಟ್ಟಿಗೆ ನಮಗೆ ಅಭಿಮಾನ ಮಾಡುವದೇ ಗೊತ್ತಿಲ್ಲ. ಅಂದಬಳಿಕ ಅದನ್ನು ಬಿಡುವಬಗೆಯಾದರೂ ಹೇಗೆ ತಿಳಿಯಬೇಕು? ಕಲಿತದ್ದನ್ನು ಮರಿಯಲಿಕ್ಕೆ ಬಂದೀತಲ್ಲದೆ, ಮರೆತದ್ದನ್ನು ಕಲಿಯಲಿಕ್ಕೆ ಬರುವದು ಬಲು ಕಷ್ಟಸಾಧ್ಯವದೆ. ಅದಕ್ಕಾಗಿಯೇ ಮುನಿಪುತ್ರಾ, ನೀನು ನಿಮ್ಮಪ್ಪನ ಅಪ್ಪಣೆಯಂತೆ ಗೃಹಸ್ಥಾಶ್ರಮಿಯಾಗು. ಅದರಲ್ಲಿ ಅಭಿಮಾನ ಬಿಡಲಿಕ್ಕೆ ಕಲಿ. ಅಂದರೆ ನೀನೂ ನನ್ನಂತೆ ಜೀವನ್ಮುಕ್ತನಾಗುವೆ. ರೋಗಿನಿಂದ ಯತಿಯಾದರೆ ಮನಸ್ಸಿನಿಂದ ಯತಿಯಾಗಬಲ್ಲನೇ? ಹೋತಿಗೆ ಗಡ್ಡ ಬಂದರೆ ಋಷಿಯಾಗಬಲ್ಲದೇ? ಪುಣ್ಯ ಪಾಪಕ್ಕೂ, ಸುಖದುಃಖಕ್ಕೂ ಮನವೇ ಮುಖ್ಯಕಾರಣವಾಗಿದೆ. ಉತ್ತಮ-ಮಧ್ಯಮ-ಅಧಮ ಜನ್ಮಗಳಾದರೂ ಮನಸ್ಸಿನ ಯೋಗದಿಂದಲೇ ದೊರೆಯುವವು. ಒಂದು ಮನಸ್ಸು ನಿರ್ಮಲವಾದರೆ ಇಡಿ ಜಗತ್ತೇ ನಿರ್ಮಲವಾಗಿ ಕಾಣುವದು. ಮನಸ್ಸು ಶಾಂತವಾದರೆ ಇಡಿ ಜಗತ್ತೇ ಶಾಂತವಾಗಿ ಕಾಣುವದು. ಹೀಗೆ ಪ್ರಾಣಿಗಳಿಗೆ ಮನಸ್ಸನ್ನು ಬಿಟ್ಟು ಯಾವ ಹಿತಕರ್ತನೂ ಇಲ್ಲ, ಶತ್ರುವೂ ಇಲ್ಲ. ಮನಸ್ಸೇ ನಿರ್ಮಲವಾದ ಬಳಿಕ ಈ ಆಶ್ರಮಗಳ ಗೊಡವೆಯೇ ನಮಗೆ ಬೇಡ. ಸಾರಾಂಶ, ನಮ್ಮ ಬಂಧ-ಮೋಕ್ಷಗಳಿಗೆ ಮನಸ್ಸೇ ಕಾರಣವು. ಮನಸ್ಸಿನ ಶುದ್ಧಿಗೆ ಶಾಸ್ತ್ರ, ಪುರಾಣ, ವ-ರ್ಣಾಶ್ರಮ, ಜಪ-ತಪ, ತೀರ್ಥ-ಯಾತ್ರೆ ಇವುಗಳ ಅವಶ್ಯಕತೆಯುಂಟು. ಸಾಧು-ಸಂತರೂ ಶಿಷ್ಟರೂ ಬೋಧಿಸಿದ ಮಾತನ್ನೇ ನಿನಗೆ ಈಗಹೇಳಿದ್ದೇನೆ. ಚಿತ್ತಶುದ್ಧಿಯ ಕಡೆಗೆ ಲಕ್ಷ್ಯಕೊಟ್ಟು ಯೋಗ್ಯ ಆಶ್ರಮವನ್ನು ಕೈಕೊಳ್ಳತಕ್ಕದ್ದು.

ಜನಕರಾಯನ ಈ ಅಸ್ಖಲಿತವಾದ ಭಾಷಣಕೇಳಿ, ಶುಕಾಚಾರ್ಯರು ಸುಮ್ಮಗಾದರು. ಆದರೂ ಅವರಿಗೆ ಬಡಕೊಂಡ ಸಂಶಯ ಪಿಶಾಚವು ಕೆಳಗಿನ ಮಾತುಗಳನ್ನು ಒಡನುಡಿಸದೆ ಬಿಡಲಿಲ್ಲ.

ಶುಕ—ರಾಜಾ, ನಿನ್ನಮಾತು ಕೇಳಿ ಸಮಾಧಾನವಾಗುತ್ತದೆ. ನಾನು ಮನಸ್ಸಿನಲ್ಲಿ ಮೊದಲುಏನೇನೋ ಕಲ್ಪನೆ ಮಾಡಿಕೊಂಡು ಶಬ್ದವಿದ್ಯೆಯ ಮಬ್ಬಿನಿಂದ ಕೆಟ್ಟು ಹೋಗಿದ್ದೆನು. ಇಷ್ಟು ಕಷ್ಟಬಟ್ಟು ನಿನ್ನಕಡೆಗೆ ಬಂದದರಿಂದ ಈಗೀಗ ತುಸುತುಸು ತಿಳಿಯಲಿಕ್ಕೆ ಹತ್ತಿದೆ. ಇರಲಿ. ಸಂಸಾರದಿಂದಲೇ ಪಾರತಂತ್ರ್ಯಕ್ಕೆ ಬೀಳಬೇಕಾಗುತ್ತದೆಂದು ನಾನು ನಿಶ್ಚಯಿಸಿದ್ದೆನು. ನೀನು ಹೇಳುವ ಧೋರಣವು ಬೇರೆಯಾಗಿಯೇ ಕಾಣುತ್ತದೆ. ಇದರ ರಹಸ್ಯವೇನು?

ಜನಕ—ವ್ಯಾಸನಂದನಾ, ದೇಹ, ಜೀವ-ಆತ್ಮ, ಇಂದ್ರಿಯ, ಸಂಸಾರ ಮೊದಲಾದವುಗಳಲ್ಲಿ ಯಾವವೂ ನಮ್ಮ ಬಂಧನಕ್ಕೆ ಕಾರಣವಾಗುವದಿಲ್ಲ. ಮನಸ್ಸೊಂದೇ ಬಂಧನಕ್ಕೆ ಕಾರಣವು. ಮನಸ್ಸಿನಲ್ಲಿ ಹುಟ್ಟುವ ಸಂಕಲ್ಪ-ವಿಕಲ್ಪಗಳೇ ನಮ್ಮ ಸುಖದುಃಖಗಳಿಗೆ ಕಾರಣೀಭೂತವಾಗಿರುವವು. ಕಾಮಣಿಯೆಂಬ ರೋಗವಿದ್ದವನಿಗೆ ಜಗತ್ತೇ ಹಸರುಬಣ್ಣವಾಗಿ ಕಾಣುವಂತೆ, ಮನೋವಿಕಲ್ಪದಿಂದ ನಾವು ಒಮ್ಮೆ ದೂಷಿತವಾದರೆ ಸಾಕು, ಜಗತ್ತೆಲ್ಲವೂ ನಮಗೆ ಕೆಟ್ಟದ್ದಾಗಿಯೇ ತೋರುತ್ತದೆ. ಇಂದು ಮಿತ್ರನೆಂದು ತೋರಿಕೊಂಬುವವನು ನಾಳೆ ಶತ್ರುವಾಗಿ ಕಾಣುತ್ತಾನೆ. ಇಂದು ಹಿತಕರವೆಂದು ತೋರುವ ಪದಾರ್ಥಗಳು ನಾಳೆ ಅಪಥ್ಯವಾಗಿ ಕಾಣುತ್ತವೆ. ಇದೇಮೇರೆಗೆ ಒಮ್ಮೆ ಶತ್ರುವಾದವನು ಮತ್ತೊಮ್ಮೆ ಮಿತ್ರನೆನಿಸುತ್ತಾನೆ. ಅಪಥ್ಯವಾದ ಪದಾರ್ಥಗಳು ಪಥ್ಯಕಾರಕವಾಗಿಯೇ ತೋರಹತ್ತುತ್ತವೆ. ಇದೆಲ್ಲ ಮನಸ್ಸಿನ ಹೊಯ್ದಾಟವೇಸರಿ. ಈ ಹೊಯ್ದಾಟವು ಅಡಗಿ, ಮನಸ್ಸು ಶಾಂತವೂ, ನಿರ್ಮಲವೂ, ಸ್ಥಿರವೂ ಆಯಿತೆಂದರೆ ಮೋಕ್ಷವು ಮುಂದೆಯೇ ನಿಂತುಕೊಳ್ಳುವದು. ಮನೋವಿಕಲ್ಪ-ಸಂಕಲ್ಪಗಳುಂಟಾಗಲಿಕ್ಕೆ ಸಂಸಾರದಲ್ಲಿ ಅನೇಕ ಪ್ರಸಂಗಗಳು ಬರುತ್ತವೆ. ಮತ್ತು ಅನೇಕ ಸ್ಥಳಗಳೂ ಇರುತ್ತವೆ, ಎಂಬಂತೆ ಸಕೃದ್ದರ್ಶಕ್ಕೆ ಕಾಣುತ್ತಿದ್ದರೂ, ನಿಜವಾದ ಸಂಗತಿಯು ಹಾಗಿಲ್ಲ. ಯಾಕಂದರೆ 'ಸಂಸಾರ' ಎಂಬುವಂಥ ಒಂದು ಪದಾರ್ಥವಿದ್ದರೆ ಹಾಗೆ ಹೇಳಬಹುದಾಗಿತ್ತು. ಆದರೆ ಅದೂ ಮನಸ್ಸಿನ ಒಂದು ಭಾವನೆಯೇ ಅದೆ. ಪ್ರಾಣಿಗಳೆಲ್ಲ ಭಾವನೆಗಳಿಂದ ಬದ್ಧರಾಗಿರುವದರಿಂದ, ಭಾವನಾಮಯವಾದ ಮನಸ್ಸೇ ಸಂಸಾರಕ್ಕೆ ಕಾರಣವೆಂದು, ಜ್ಞಾನಿಗಳು ನಿಶ್ಚಯಿಸಿದ್ದಾರೆ. ಪಾರಮಾರ್ಥ ದೃಷ್ಟಿಯಿಂದ ತತ್ವತಃ ವಿಚಾರ ಮಾಡಿದರೆ, ವರ್ಣವಿಲ್ಲ-ಆಶ್ರಮವಿಲ್ಲ, ಸ್ವರ್ಗವಿಲ್ಲ-ನರಕವಿಲ್ಲ, ಸ್ತ್ರೀಯಿಲ್ಲ-ಪುರುಷನಿಲ್ಲ, ತಂದೆಯಿಲ್ಲ-ತಾಯಿ ಇಲ್ಲ-ಮಕ್ಕಳಿಲ್ಲ, ನಾನೂ ಇಲ್ಲ-ನೀನೂ ಇಲ್ಲ, ಕಲ್ಲೂ ಇಲ್ಲ-ಮಣ್ಣೂ ಇಲ್ಲ, ಬೈಲಿಗೆ ಬೈಲೇ ಕಾಣುತ್ತದೆ. ಎಲ್ಲಿಯವರೆಗೆ ಇವುಗಳಲ್ಲಿ ಯಾವದಾದರೊಂದರದೇ ಆಗಲಿ ನಮ್ಮ ಪ್ರತೀತಿಗೆ ಬರುತ್ತದೋ, ಅಲ್ಲಿಯವರೆಗೆ ನಮಗೆ ಇವು ಎಲ್ಲವೂ ಬೇಕು. ಸೃಷ್ಟಿಯ ಸಂರಕ್ಷಣೆಯ ಸಲುವಾಗಿ ದೇವರು ಈ ಎಲ್ಲ ಮರ್ಯಾದೆ (ಮೇರೆ) ಗಳನ್ನುಂಟು ಮಾಡಿದ್ದಾನೆ. ಈಶ್ವರಕೃತಿಯನ್ನು ಪ್ರಾಣಿಗಳು ಎಂದೂ ಬದಲಿಸಲಾರವು. ಈಶ್ವರನು ನಿರ್ಮಿಸಿದ ಈ ವರ್ಣಾಶ್ರಮವ್ಯವಸ್ಥೆಯು ಮುರಿದುಹೋದರೆ, ಜಗತ್ತಿನ ನಾಶವುಂಟಾಗದೆ ಇರದು. ವರ್ಣಾಶ್ರಮವ್ಯವಸ್ಥೆಯು ಕಣ್ಣಿಗೆ ಕಾಣುತ್ತಲೂ, ಕಾಣದೆಯೂ ಈ ಸೃಷ್ಟಿಯಲ್ಲಿ ಸ್ಥಿರವಾಗಿ ಇದ್ದೇ ಇರುವದು.

ಶುಕ—ರಾಜಾ, ವೇದೋಕ್ತ ಧರ್ಮವು ಅತಿ ಸರ್ವೋತ್ತಮವಾದದ್ದೆಂದು ಹೇಳುವಿ, ಅದರಲ್ಲೇನೂ ಸಂಶಯವಿಲ್ಲ. ಆದರೆ ವೇದದಲ್ಲಿ ಯಜ್ಞಯಾಗಾದಿಗಳ ಸಂಬಂಧವಾಗಿ ಪಶುಹಿಂಸೆಯನ್ನು ಹೇಳಿರುವದಲ್ಲ. ಹಿಂಸೆ ಮಾಡುವದು ಯಾವ ಧರ್ಮವು?

ಜನಕ—ಶುಕನೇ, ವೇದಗಳ ರಹಸ್ಯ ತಿಳಿಯುವದು ಬಹು ದುಃಸಾಧ್ಯವದೆ. ವೇದಗಳು ಅಸಂಖ್ಯವಾಗಿರುವದರಿಂದ ಅವುಗಳ ಏಕವಾಕ್ಯತೆಯನ್ನು ಮಾಡುವದು ಆಗದ ಮಾತು. ಆದರೂ ಅವುಗಳ ಏಕವಾಕ್ಯತೆಯನ್ನುಂಟುಮಾಡಲಿಕ್ಕೆ ಪೂರ್ವ, ಉತ್ತರಮೀಮಾಂಸೆಗಳುಂಟಾದವು. ಸ್ಮೃತಿಗಳೂ ಕೂಡ ಅದೇ ಕೆಲಸವನ್ನು ಮಾಡಿರುವವು; ಪುರಾಣಗಳದ್ವಾರ ವ್ಯಾಸರು ಸಹ ಅದೇ ಕೆಲಸವನ್ನು ಮಾಡಿರುತ್ತಾರೆ. ವೇದದಲ್ಲಿ ಹೇಳಿದ ಹಿಂಸೆಯು ಅಹಿಂಸೆಯಂತಲೇ ತಿಳಿಯಬೇಕು. ಯಾಕಂದರೆ, ಕೇವಲ ನಿಸ್ಪೃಹನಾಗಿ ಕೃಷ್ಣಾರ್ಪಣಪೂರ್ವಕವಾಗಿ, ಇಂದೊಂದು ವೇದೋಕ್ತ ಕರ್ಮವೆಂದು ಭಾವಿಸಿ, ಮಾಡಿದ ಹಿಂಸೆಯು, ಹಿಂಸೆಯಾಗಲಾರದು. ತನ್ನ ದೇಹವನ್ನು ಪುಷ್ಟಿಗೊಳಿಸುವದಕ್ಕೆ, ಇಲ್ಲವೆ ನಾಲಿಗೆಯ ರುಚಿಗೆ, ಗೃಹಸ್ಥನು ಆ ಹಿಂಸೆ ಮಾಡಿರುವದಿಲ್ಲ. ಅಹಂಭಾವನೆಯಿಂದ ಯಾವದೊಂದು ಕೃತ್ಯವನ್ನು ಮಾಡಿದರೆ ಮಾತ್ರ, ಪ್ರಾಣಿಗೆ ಅದರ ದೋಷ ತಟ್ಟದೆ ಬಿಡದು.

ಶುಕ—ಮಹಾರಾಯಾ, ಮಾಯೆಯಲ್ಲಿ ಮುಳುಗಿದ ಮನುಷ್ಯನು ನಿಸ್ಪೃಹನಾಗುವ ಬಗೆ ಹ್ಯಾಗೆ? ಮಾಯೆಯ ಉಲ್ಲಂಘನ ಮಾಡದವನು ನಿರಹಂಕಾರನಾಗುವದು ಹ್ಯಾಗೆ? ಅಡಿಗಡಿಗೆ ವಿಕಾರವಶನಾಗುವ ಗೃಹಸ್ಥಾಶ್ರಮಿಯು, ಪರದ್ರೋಹ ಮಾಡದೆ ಬಿಟ್ಟಾನೇನು? ಪ್ರತ್ಯಕ್ಷ ಕಾಣತಕ್ಕ ಪದಾರ್ಥಗಳೆಲ್ಲ ಅನಿತ್ಯವೆಂದು ಹೇಗೆ ಭಾವಿಸಿಯಾನು? ರಾಜಾ, ನಿನ್ನನ್ನೇ ನೋಡು. ರಾಜ್ಯಸುಖವನ್ನು ವಿಷದಂತೆ ತಿಳಿದಿರುವಿಯಾ? ದ್ರವ್ಯದಾಶೆಯನ್ನು ಬಿಟ್ಟಿರುವೆಯಾ? ರಾಜ್ಯಗಳ್ಳಬೇಕೆಂಬ ಹಂಬಲವನ್ನು ತೊರೆದಿರುವೆಯಾ? ಅಂದಮೇಲೆ ನೀನು ಜೀವನ್ಮುಕ್ತನಾದೆ ಹ್ಯಾಗೆ? ಇವರು ಕಳ್ಳರು, ಇವರು ಸುಳ್ಳರು, ಇವರು ಸಾಧುಗಳು, ಇವರು ಅಸಾಧುಗಳು, ಇವರು ನನ್ನವರು, ಇವರು ಹೆರವರು, ಎಂದು ನೀನು ಭೇದಮಾಡಿದಮೇಲೆ, ನೀನು ವಿದೇಹನು ಹ್ಯಾಗೆ? ನೀನು ಹುಳಿ, ಉಪ್ಪು, ಖಾರ ಮುಂತಾದ ರುಚಿಯುಳ್ಳ ಪದಾರ್ಥಗಳನ್ನೂ, ಸವಿಸವಿಯಾದ ಹಣ್ಣು-ಹಂಪಲ, ಮೇವಾ-ಮಿಠಾಯಿಗಳನ್ನೂ ತಿನ್ನುವದನ್ನು ಬಿಟ್ಟಿರುವಿಯಾ? ಈ ರಾಜ್ಯ, ಈ ಬೊಕ್ಕಸ, ಈ ಚತುರಂಗಸೇನೆ ಇವೆಲ್ಲ ನನ್ನವೆಂಬ ಅಭಿಮಾನವು ನಿನಗೆ ತಪ್ಪಿಲ್ಲ. ಪ್ರಾಕೃತರಂತೆ ನಗುತ್ತೀ-ಅಳುತ್ತೀ.. ಹೀಗಿರಲು, ನಿನಗೆ ಜೀವನ್ಮುಕ್ತನೆಂದು ಕರೆಯುವವರೇ ಮೂರ್ಖರಾಗಿರಬೇಕು. ಮುಕ್ತನು ಹಾರ

ವನ್ನೂ ಹಾವನ್ನೂ ಸಮನಾಗಿ ತಿಳಿಯುತ್ತಾನೆ; ಹೆಂಣನ್ನೂ ಹೊನ್ನನ್ನೂ ಸರಿಯಾಗಿ ಭಾವಿಸುತ್ತಾರೆ. ತನ್ನಂತೆ ಪರರನ್ನು ಬಗೆಯುತ್ತಾನೆ. ಇವುಗಳಲ್ಲಿ ಒಂದಾ ಇಲ್ಲಿ ನನಗೆ ಕಂಡುಬರಲೊಲ್ಲವು. ಜನಕರಾಯಾ, ನಾನು ಸ್ಪಷ್ಟವಾಗಿ ಮಾತಾಡುತ್ತೇನೆಂದು ಮಾತ್ರ ಸಿಟ್ಟಾಗಗಾರದು. ನಿಮ್ಮ ವಂಶಜರೆಲ್ಲ ವಿದೇಹರೇ ಎಂದು ಕರೆಯಲ್ಪಡುತ್ತಾರೆ. ಬರಿಯ ಅಡ್ಡಹೆಸರೇ ವಿದೇಹ ಎಂದು ಕಾಣುತ್ತದೆಯೋ ಹೊರತು, ನಿಜವಾದ ವಿದೇಹತ್ವವು ನನಗೆ ತೋರಿಬರಲೊಲ್ಲದು. ನಿಮ್ಮ ಕುಲವಲ್ಲಿ ನಿಮಿಯೆಂಬಹೆಸರಿನ ರಾಜನೊಬ್ಬನು ಆಗಿ ಹೋದನಷ್ಟೇ! ಆತನು ಯಜ್ಞ ಮಾಡಬೇಕೆಂದು ಗುರುಗಳಾದ ವಶಿಷ್ಠರನ್ನು ಕರೆಯಕಳುಹಿದನು. ಗುರುಗಳು ಇಂದ್ರಲೋಕಕ್ಕೆಹೋಗುವ ಅತ್ಯವಶ್ಯಬಿದ್ದುದರಿಂದ, ಯಜ್ಞಸಾಹಿತ್ಯಗಳನ್ನು ಸಂಗ್ರಹಿಸಲಿಕ್ಕೆ ಸೂಚಿಸಿ, ಮರಳಿ ತೀವ್ರಬರುವೆನೆಂದು ಹೇಳಿಅವರು ಅತ್ತಹೋದರು. ಇತ್ತ ನಿಮಿರಾಜನು ಬೇರೆ ಗುರುಗಳ ಮುಖಾಂತರ ಯಜ್ಞವನ್ನು ಸಾಂಗಗೊಳಿಸಿಕೊಂಡನು. ಮುಂದೆ ವಶಿಷ್ಠರು ಬಂದು ನಿಮಿರಾಜನಿಗೆ ಶಾಪಕೊಡಲು, ರಾಜನು ತಾನೂ ವಶಿಷ್ಠರಿಗೆ ಪ್ರತಿಶಾಪಕೊಟ್ಟನು. ಗುರುಗಳಿಗೆ ಸಹ ಶಾಪಕೊಟ್ಟ ನಿಮಿಯು ವಿದೇಹಿಯು ಹ್ಯಾಗೆ? ನೀನಾದರೂ ಅದೇ ವಂಶಜನು. ನಿನಗೆ ವಿದೇಹಿಯೆಂಬದು ವಿನೋದಕ್ಕಾಗಿಯೇ ಸರಿ.

ಜನಕ—ಗುರುಪುತ್ರರೇ, ನೀವನ್ನುವದು ಅಕ್ಷರಶಃ ನಿಜವು. ಯಾಕಂದರೆ ಶಬ್ದವ್ಯವಹಾರವು ಹೀಗೆ ಯಾವಾಗಲೂ ಸುಳ್ಳೇ ಇರುತ್ತದೆ. ಮಹಾರಾಜ, ನೀವು ಗುರುವರ್ಯ ವ್ಯಾಸರ ಅಪ್ಪಣೆಯಂತೆ ವಿವಾಹಮಾಡಿಕೊಳ್ಳಿರಿ. ಅದರಲ್ಲಿಯೇ ನಿಮಗೆ ಅಖಂಡ ಕಲ್ಯಾಣವಿರುವದು. ತಂದೆಯ ಸಂಗತಿಯನ್ನು ಬಿಟ್ಟು ನಿಃಸಂಗಿಯಾಗಿ ಅರಣ್ಯದಲ್ಲಿರಬೇಕೆಂದು ನೀವು ಇಚ್ಛಿಸುತ್ತೀರಿ. ಅಲ್ಲಿಗೆ ಹೋದರೆ ಅಲ್ಲಿಯೂ ಪಶುಪಕ್ಷಿ, ಕ್ರಿಮಿಕೀಟಕಾದಿಗಳು ನಿಮ್ಮ ಹತ್ತರವೇ ಇರುತ್ತಿರುವದಿಲ್ಲವೇನು? ಅವುಗಳ ಸಂಗವು ನಿಮಗೆ ತಪ್ಪಲಾರದು. ಅಂದಮೇಲೆ ಪ್ರೇಮದಿಂದ ಸಾಕಿ ಸಲಹಿದ ತಂದೆಯ ಸಂಗತಿಯನ್ನು ಬಿಟ್ಟು ಹೋದದ್ದರಲ್ಲಿ ಭೂಷಣವೇನು? ಪಂಚಮಹಾಭೂತಗಳ ನಿತ್ಯಸಹವಾಸವಂತು ತಪ್ಪುವಂತೇ ಇಲ್ಲ. ಇನ್ನು ಚಿಂತೆಯ ವಿಷಯವಾಗಿ ವಿಚಾರಮಾಡಿದರೆ, ಅದು ಎಲ್ಲಿ ಹೋದರೂ ಸರ್ವಥಾ ಬಿಟ್ಟದ್ದಿಲ್ಲ. ಯಾಕಂದರೆ ದೇಹರಕ್ಷಣೆಗಾಗಿ ನಿಮಗೆ ಅನ್ನ ಬೇಕು. ಆಹಾರಕ್ಕಾಗಿ ಹಣ್ಣುಹಂಪಲ, ಗಡ್ಡೆಗೆಣಸುಗಳು ಬೇಕು; ಕೊನೆಗೆ ತರಗೆಲೆಗಳಾದರೂ ಬೇಕು. ಇದೇ ಮೇರೆಗೆ ನಿಮಗೆ ದಂಡಬೇಕು, ಕಮಂಡಲು ಬೇಕು, ಅಜಿನಬೇಕು, ನೀರು ಬೇಕು, ಇವುಗಳ ಚಿಂತೆಯಾದರೂ ನಿಮಗೆ ಹುಟ್ಟುವದಿಲ್ಲವೆ? ವ್ಯಾಸರನ್ನು ಬಿಟ್ಟ

ದೂರಹೋಗುವದರಿಂದ ಚಿಂತೆಯೂ ತಪ್ಪಲಿಲ್ಲ, ಸಂಗವೂ ತಪ್ಪಲಿಲ್ಲ. ಸುಮ್ಮನೆ ಅಶಕ್ಯ ಸಂಗತಿಯಲ್ಲಿ ಮನಸ್ಸು ಹಾಕುವದಕ್ಕಿಂತ, ಅನುಭವಿಕರು ಹೇಳಿದ ಉಪಾಯಮಾಡಿ ಲಾಭಮಾಡಿಕೊಳ್ಳುವದು ಒಳಿತೇ ಸರಿ. ಗೃಹಸ್ಥಾಶ್ರಮದಿಂದ ಸ್ವಾರ್ಥ ಪರಾರ್ಥ ಇವೆರಡೂ ಸಾಧಿಸುತ್ತವೆ. ಕೇವಲ ರತಿ ಸುಖಕ್ಕಾಗಿ ಲಗ್ನಮಾಡಿಕೊಳ್ಳುವದು ಆಶ್ರಮಧರ್ಮವೇ ಅಲ್ಲ. ಅದು ವಿಷಯ ಸುಖವಾಯಿತು. ಇನ್ನು ನನ್ನ ವಿಷಯವಾಗಿ ಹೇಳುವದೇನಂದರೆ, ನಾನು ಎಲ್ಲ ಚಿಂತೆಗಳನ್ನು ಮಾಡುತ್ತಿದ್ದರೂ ಒಂದರಲ್ಲಿಯೂ ಆಸಕ್ತನಾಗಿಲ್ಲ. ಎಲ್ಲಿ ವಿಕಲ್ಪವೋ ಅಲ್ಲಿ ದುಃಖವು. ನನ್ನ ವಿಷಯದಲ್ಲಿ ಸಂಶಯವೂ, ಅಪ್ಪನ ವಚನದಲ್ಲಿ ಅಪನಂಬಿಗೆಯೂ ಉಂಟಾದುದರಿಂದಲೇ ನೀವು ಇಲ್ಲಿಯವರೆಗೆ ಕಷ್ಟಬಟ್ಟು ಬರಬೇಕಾಯಿತು. ಈ ಮನೋವಿಕಾರಗಳೇ ಹುಟ್ಟದಿದ್ದರೆ ನೀವು ದುಃಖಪಡುವ ಕಾರಣವೇ ಇದ್ದಿಲ್ಲ. ನಾನು ರಾಜ್ಯ ಭಾರಹೊತ್ತಿದ್ದೇನೋ ನಿಜ. ಆದರೆ ಅದು ನನ್ನದೆಂದು ಕನಸುಮನಸಿನಲ್ಲಿ ಕೂಡ ನಾನು ನೆನಿಸುವದಿಲ್ಲ. ದೇಹಬೀಳುವವರೆಗೆ ಹೇಗೆಯೋ ಒಜ್ಜೆ ಹೊತ್ತಿರುವ ಎತ್ತಿನಂತೆರಾಜ್ಯಭಾರಹೊತ್ತುಕೊಂಡಿರುವೆನು. ದೈವವು ಅದನ್ನು ಮುಂದಕ್ಕೆ ನೂಕುತ್ತಿರುವದು. ಎಲ್ಲ ಅವಸ್ಥೆಗಳಲ್ಲಿ ನಾನು ಅನಂದದಿಂದಲೇ ಇರುತ್ತೇನೆ. ನಾನು ಮಲಗುವದೂ ಸುಖದಿಂದ, ಉಣ್ಣುವದೂ ಸುಖದಿಂದ, ವಿಹಾರಮಾಡುವದೂ ಸುಖದಿಂದ; ಒಮ್ಮೊಮ್ಮೆ ಅಳುವದಾದರೂ ಸುಖದಿಂದಲೇ. ಎಲ್ಲ ಕಡೆಗೂ ನನಗೆ ಸುಖವೇ ಕಣ್ಣಿಗೆ ಕಾಣುತ್ತದೆ ನಾನು ಬಂಧನದ ಲೇಪವನ್ನು ಎಷ್ಟೂ ಹಚ್ಚಿಕೊಂಡಿಲ್ಲ. ಅಂತೇ ನಾನು ಸರ್ವದಾ ಸುಖಿಯಾಗಿರುತ್ತೇನೆ. ಆದರೆ ಶುಕರೇ, ನಿಮ್ಮ ಮನಸ್ಸಿನ ಸ್ಥಿತಿಯು ಇದಕ್ಕೆ ತೀರ ವಿಪರೀತವಾಗಿದೆ. 'ನಾನು ಬದ್ಧನೇ ಇದ್ದೇನ"ಎಂದು ನೀವು ತಿಳಕೊಂಡದ್ದರಿಂದ ನಿಮಗೆ ಕಷ್ಟಸೋಸುವ ಪ್ರಸಂಗ ಬಂದದೆ. ತಂದೆಯ ಮಾತು ರುಚಿಸದ ಕಾರಣವಾದರೂ ಅದೇ. ನನ್ನ ವಿಷಯವಾಗಿ ಸಂಶಯವುಂಟಾದದ್ದರ ಕಾರಣವಾದರೂ ಅದೇ! ನಿಮ್ಮಂತೆಯೇ ಜಗತ್ತೆಂದು ತಿಳಿದು ಮೋಸಹೋಗಬೇಡಿರಿ. ಎಲ್ಲ ಸಂಶಯಗಳನ್ನು ಬಿಟ್ಟು, ಪಾಲಿಗೆ ಬಂದದ್ದು ಪಂಚಾಮೃತವೆಂದು ಭಾವಿಸಿ, ಅದನ್ನು ಸಮಾಧಾನದಿಂದ ಭೋಗಿಸಿಯೇ ತೀರಬೇಕು. ಅಂದರೆ ಮಾತ್ರ ಸುಖವು ಸಿಗುವದು. ಸುಖದ ನಿಜವಾದ ಉಪಾಯವು ಇದೇ ಸರಿ. 'ನಾನು, ನನ್ನದು,' ಎಂಬ ಭಾವನೆಯನ್ನು ಮನಸ್ಸಿನಿಂದ ಹೊರದೂಡಿದರೆಎಲ್ಲವೂ ಸುಖಮಯವಾಗಿ ತೋರುವದು. ಈ ಉಪಾಯವು ಮಾತಾಡಲಿಕ್ಕೆ ಸುಲಭವಾದದ್ದೂ, ಕೇಳಲಿಕ್ಕೆ ಇಂಪಾದದ್ದೂ ಅದೆ. ಆದರೆ ಇದರಂತೆ ನಡೆಯುವದು ಮಾತ್ರ ಅತಿಶಯ ಕಠಿಣವಾದದ್ದುಂಟು. ಆದದರಿಂದ ಆಶ್ರಮರೂಪೀ

ಉತ್ಕೃಷ್ಟ ಉಪಾಯವನ್ನು ಕೈಕೊಳ್ಳಬೇಕು. ಆದರಿಂದ ಪತಿತನಾಗುವ ಭಯ ವಿರುವದಿಲ್ಲ. ಶುಕಾಚಾರ್ಯರೇ, ತಾವು ಜ್ಞಾನಿಗಳೇ ಇರುವಿರಿ. ನನ್ನಂಥ ಪಾಮರನು ತಮಗೆ ಉಪದೇಶಮಾಡುವದು ಯೋಗ್ಯವಲ್ಲ. ನನಗೆ ಗೊತ್ತಿದ್ದದ್ದನ್ನು ನಿಮಗೆ ಮರೆಮಾಜದೆ ಹೇಳಿರುತ್ತೇನೆ. ಇದರಮೇಲೆ ಹೆಚ್ಚಿಗೇನೂ ಹೇಳುವದುಳಿಯಲಿಲ್ಲ. ಶಾಸ್ತ್ರ ಹಾಗು ಶ್ರದ್ಧೆ ಇವು ಕಲ್ಯಾಣದ ಸಾಧನಗಳೂ, ಸಂಶಯವು ನಾಶದ ಕಾರಣವೂ ಆಗಿರುವವೆಂಬದನ್ನು ಮಾತ್ರ ಮರೆಯಬೇಡಿರಿ. ಇ-ದೊಂದೇ ವಾಕ್ಯದಲ್ಲಿ ಸರ್ವಧರ್ಮೋಪದೇಶದ ಸಾರವು ಬಂದಿರುತ್ತದೆ.

ಜನಕರಾಯನ ಭಾಷಣವನ್ನು ಕೇಳಿ ಶುಕರಿಗೆ ಪರಮಸಮಾಧಾನವಾಯಿತು. ಅವರ ಸಂಶಯಗಳೆಲ್ಲ ದೂರಾದವು. ಅವರು ತಂದೆಯ ಆಜ್ಞೆಯಂತೆ ವಿವಾಹಮಾಡಿಕೊಂಡು, ಜನಕರಾಯನಂತೆ ನಿಃಸಂಗನಾಗಿಯೇ ಇರುವೆನೆಂದು ನಿಶ್ಚಯಮಾಡಿಕೊಂಡರು. ಶುಕಾಚಾರ್ಯರಿಗೆ ಸಮಾಧಾನವಾದದ್ದನ್ನು ನೋಡಿ ಜನಕರಾಯನಿಗೂ ಸಂತೋಷವೆನಿಸಿತು. ಅರಸನ ಅಪ್ಪಣೆಯಿಂದ ಶುಕಾಚಾರ್ಯರು ಕೆಲವು ದಿವಸ ಮಿಥಿಲಾನಗರದಲ್ಲಿಯೇ ನಿಂತರು.

---

## ೯ ವಿವಾಹ ಸಮಾರಂಭ.

ಶ್ರೀ ಶುಕರು ಯಾವಾಗಲೂ ಎಡೆಬಿಡದೆ ಜನಕರಾಯನ ಕೂಡ ಕಾಲಕಳೆಯುತ್ತಿದ್ದರು. ಅರಸನು ರಾಜಸಭೆಗೆ ಹೋಗಲಿ, ಕಾನನಕ್ಕೆ ಬೇಟೆಯಾಡಹೋಗಲಿ, ಪಂಡಿತರೊಡನೆ ವಾದಮಾಡುತ್ತಿರಲಿ, ಉಣ್ಣುತ್ತಿರಲಿ, ತಿನ್ನುತ್ತಿರಲಿ, ಪ್ರತಿಯೊಂದು ಪ್ರಸಂಗದಲ್ಲಿ ಅರಕ್ಷಣ ಸಹ ಅಗಲದೆ ಅವನೊಡನೆ ಇರುತ್ತಿದ್ದರು. ದಿನದಿನಕ್ಕೆ ಒಬ್ಬರಮೇಲೊಬ್ಬರು ಹೆಚ್ಚು ಹೆಚ್ಚು ಲೋಭಮಾಡಹತ್ತಿದರು. ಶುಕರ ವಿನಯಗುಣವೂ, ಮಧುರಭಾಷಣವೂ, ಶಾಂತಸ್ವಭಾವವೂ, ಗೌರವದ ಆಚರಣೆಯೂ, ಅರಸನ ಹೃದಯವನ್ನು ಪ್ರಸನ್ನವಾಗಮಾಡಿದ್ದವು. ತಂದೆಯನ್ನು ತೊರೆದು, ಆಶ್ರಮಸುಖವನ್ನು ಮರೆದು, ಸಂಚಾರದಲ್ಲಿ ಬೆರೆದು, ಶುಕರು ಮನೆಗೆ ಬಂದದ್ದು ಪೂರ್ವಸುಕೃತವೆಂದು ಭಾವಿಸಿ, ಜನಕನು ಆನಂದದಿಂದ ಅವರೊಡನೆ ಕಾಲಕಳೆದನು. ನಗರದೊಳಗಿನ ನರನಾರಿಯರು ಈ ಮಹಾತ್ಮರ ದರ್ಶನದಿಂದ ಧನ್ಯರಾದರು. ಶುಕಾಚಾರ್ಯರು ಈ ಅವಧಿಯಲ್ಲಿ ಜನಕರಾಯನ ಎಲ್ಲ ವರ್ತನಗಳನ್ನು ಲಕ್ಷ್ಯಪೂರ್ವಕವಾಗಿ ನೋಡಿಟ್ಟರು. ಯಾವ ಸುಖದುಃಖಗಳನ್ನೂ ಮನಸ್ಸಿನಲ್ಲಿ ತಾರದೆ, ಅನ್ಯಾಯ-ಅಧರ್ಮಗಳು ಉಂಟಾಗದಂತೆ ನೀತಿಯಿಂದ-ನಿರ್ಮಲತ್ವದಿಂದ ವರ್ತಿಸುವ ಜನಕರಾಯನ ಆಚರಣೆಯು, ಶುಕರಿಗೆ ಒಂದು ಮಾದರಿಯಾ

ಯಿತು. ಗೃಹಸ್ಥಾಶ್ರಮದಲ್ಲಿದ್ದರೂ ನಿರಾಸಕ್ತರಾಗಿರಲಿಕ್ಕೆ ಚೆನ್ನಾಗಿ ಕಲಿತು ಕೊಂಡರೆಂದರೂ ಅಡ್ಡಿ ಇಲ್ಲ. ಮುಂದೆ ವ್ಯಾಸಾಶ್ರಮಕ್ಕೆ ಹೊರಡಲಿಕ್ಕೆ, ಶುಕರು ಜನಕರಾಯನನ್ನು ಕೇಳಿದರು. ಅವರನ್ನು ಕಳಿಸಲಿಕ್ಕೆ ಜನಕನಿಗೆ ಮನಸ್ಸೇ ಆಗ ಲೊಲ್ಲದು! ಅಕಸ್ಮಾತ್ತಾಗಿ ಅರಕ್ಷಣ ಕೂಡಿದರೇ ಎಷ್ಟೋ ಸ್ನೇಹಬೆಳೆಯುತ್ತದೆ; ಇವರಿಬ್ಬರಂತು ತಿಂಗಳಾನುತಿಂಗಳ ಸುಖಸಂಭಾಷಣ, ಭೋಜನಪಾನಗಳಿಂದ ಚಿರಪರಿಚಿತರಾದವರು. ಉಭಯತರ ಪ್ರೇಮದ ಬಳಿಕೆಯಿಂದ ಇನ್ನೂ ನಾಲ್ಕೊಪ್ಪತ್ತು ಶುಕರು ತಮ್ಮಲ್ಲಿರಲೆಂದು, ಜನಕರಾಯನಿಗೆ ಅನ್ನಿಸಿದ್ದು ಅರಿದಲ್ಲ. ಆದ ರಿಂದ ಅರಸನು ಶುಕರನ್ನು ನೋಡಿ—"ಗುರುಪುತ್ರರೇ, ತಮ್ಮನ್ನು ನಿರೂಪ ಕೊಟ್ಟು ಕಳಿಸಬೇಕಾದರೆ ಈಗ ನನ್ನ ಜೀವದ ಸುತ್ತು ಬಂದದೆ. ನಿಮಿತ್ತ ಮಾತ್ರಕ್ಕೆ ಸಂಶಯದ ನೆವಮಾಡಿಕೊಂಡು ಇಲ್ಲಿಗೆ ಬಂದು, ನನ್ನನ್ನು ಉದ್ಧಾರ ಮಾಡಿದಿರಿ. ನಿಮ್ಮ ಸೌಜನ್ಯವನ್ನು ಹೇಗೆ ಮರೆಯಲಿ? ನಿಮ್ಮ ಸ್ವಭಾವವನ್ನು ಎಷ್ಟು ಹೊಗಳಲಿ? ನನ್ನ ಕೈಯಿಂದ ತಮಗೆ ತಕ್ಕ ಸತ್ಕಾರವಾಗಿರಲಿಕ್ಕಿಲ್ಲ. ಏನಾದರೂ ನ್ಯೂನಾಧಿಕ್ಯಗಳಾಗಿದ್ದರೆ ಕ್ಷಮಿಸಬೇಕು! ತಮ್ಮ ಕೆಲಸಕ್ಕೆ ಅನನು ಕೂಲವಾಗದಂತೆ ಇದ್ದರೆ, ತಮಗೆ ಇಲ್ಲಿ ಇರಲಿಕ್ಕೆ ಸಮಾಧಾನ ತೋರಿದರೆ, ನಿಮ್ಮ ತಾತಂದಿರಿಗೆ ನಿಮ್ಮಿಂದ ತಡವಾಯಿತೆಂದು ಸಿಟ್ಟು ಬಾರದಂತೆ ಇದ್ದರೆ, ನೀವೂ ನಾವೂ ಕೂಡಿರಬೇಕೆಂಬ ನಿಮ್ಮ ಪ್ರೇಮವಿದ್ದರೆ, ದಯವಿಟ್ಟು, ಇನ್ನು ಕೆಲವುದಿವಸ ತಾವು ಇಲ್ಲಿ ಇದ್ದು ಹೋಗಬೇಕೆಂದು ಪ್ರಾರ್ಥಿಸುತ್ತೇನೆ."ಅಂದನು.

ಇತ್ತ ಶುಕಾಚಾರ್ಯರಿಗೆ ಮನಸ್ಸಿನಲ್ಲಿ ಇಂಥ ಸತ್ಪುರಷನನ್ನು ಅಗಲಿ ಹೋಗಲಿಕ್ಕೆ ಇಚ್ಛೆಯಾಗಲೊಲ್ಲದು; ಆದರೆ ತಂದೆಯನ್ನಗಲಿ ಬಂದದ್ದೂ, ತಂ ದೆಯ ಅಪ್ಪಣೆಯಂತೆ ಮದುವೆ ಮಾಡಿಕೊಳ್ಳಲಿಕ್ಕೆ ಮನಸ್ಸು ಒಪ್ಪಿದ್ದೂ, ಈ ಸುದ್ದಿ ಯನ್ನು ಯಾವಾಗ ಹೇಳಿ ವ್ಯಾಸರನ್ನು ಸಂತೋಷಪಡಿಸೇನೋ ಎಂಬ ಲವಲ ವಿಕೆ ಉಂಟಾದದ್ದೂ, ಬಂದು ಬಹಳ ದಿವಸಗಳಾದದ್ದೂ, ಇವೆಲ್ಲ ನೆನಪಾಗಿ, ವ್ಯಾಸಾಶ್ರಮದ ಕಡೆಗೆ ಶುಕರ ಮನಸ್ಸು ಹರಿಯಹತ್ತಿತು. ಅರಸನ ಪ್ರಾರ್ಥನೆ ಯಂತೆ ಮತ್ತೊಂದು ವಾರ ಅಲ್ಲಿಯೇ ಕಳೆದು, ಒಂದು ಸುಮುಹೂರ್ತದಲ್ಲಿ ಮಿಥಿ ಲಾನಗರದಿಂದ ಶುಕರು ಹೊರಬಿದ್ದರು. ಇವರನ್ನು ಕಳಿಸಿ ಬರುವದಕ್ಕಾಗಿ, ಸ್ವತಃ ಜನಕರಾಯನು ಉತ್ತಮೋತ್ತಮರಾದ ವಿದ್ವಾಂಸರೊಂದಿಗೆ ಬರಿಗಾಲಿನಿಂದ ನಡೆಯುತ್ತ ಊರ ಹೊರತನಕ ಬಂದನು. ಆಗ ರಾಜನು ಶುಕಾಚಾರ್ಯರ ಕಾಲುಗಳನ್ನು ಗಟ್ಟಿಯಾಗಿ ಹಿಡಕೊಂಡು, ಅವುಗಳ ಮೇಲೆ ತನ್ನ ತಲೆಯನ್ನಿಟ್ಟ ಕಣ್ಣೀರು ಸುರಿಸುತ್ತ ಗದ್ಗದ ಕಂಠದಿಂದ :—'ಮಹಾರಾಜ, ತಮ್ಮಂಥವರ ದರ್ಶ

ನಾಗುವದು ಬಹು ದುರ್ಲಭವು! ಏನೋ ಮಹದ್ಭಾಗ್ಯವಿದ್ದದ್ದರಿಂದಲೇ ತಮ್ಮ ಪಾದಧೂಳಿಯು ನನ್ನ ಮಸ್ತಕಕ್ಕೆ ಬಡೆಯಿತು. ತಮ್ಮ ದರ್ಶನವು ಮುಂದೆ ಎಂದೋ? ಈಗಂತು ಇದೇ ತಮ್ಮ ಕಡೆಯದರ್ಶನವಲ್ಲವೇ? ತಮ್ಮಂಥ ನಿಸ್ಪೃಹಿಗಳನ್ನು ಹ್ಯಾಗೆ ಮರೆಯಲಿ? ಹೇಗೆ ಬಿಟ್ಟಿರಲಿ? ಎಷ್ಟು ಸಾರೆ ತಮ್ಮನ್ನು ನೋಡಿದರೂ ಮನಸ್ಸು ದಣಿಯಲೊಲ್ಲದು. ಎಲ್ಲ ರಾಜ್ಯವನ್ನು ಬಿಟ್ಟು ತಮ್ಮನ್ನೇ ನೋಡುತ್ತ ಕೂಡ್ರಬೇಕೆಂಬುವಹಾಗೆ ಆಗುತ್ತದೆ. ಸ್ವಾಮೀ ಮಹಾರಾಜರೇ, ನನ್ನ ಮೇಲಾದ ತಮ್ಮ ಉಪಕಾರವನ್ನು ಎಷ್ಟೆಂದು ಹೇಳಲಿ? ವ್ಯಾಸರ ಪುಣ್ಯಾಶ್ರಮವೆಲ್ಲಿ? ಈ ನನ್ನ ಅಪವಿತ್ರವಾದ ಪಟ್ಟಣವೆಲ್ಲಿ? ಏನೋ ನಿಮಿತ್ತಮಾಡಿ ಇಲ್ಲಿಗೆ ಬಂದು, ನನ್ನನ್ನು ಉದ್ಧರಿಸಿದಿರಿ. ಇದೇ ಸಾಕು. ಇನ್ನು ಅಪ್ಪಣೆ ಕೊಡಿರಿ! ತಮ್ಮಂಥವರ ಚರಣಕಮಲಗಳ ದರ್ಶನ ಲಭಿಸುವದು ಖಂಡಿತ ದುರ್ಲಭವು" ಎಂದು ನುಡಿದನು. ಶುಕರು ಅರಸನ ತಲೆಯ ಮೇಲೆ ಕೈಯಿಟ್ಟು, ಪ್ರೀತಿಯಿಂದ ಆತನನ್ನು ಮೇಲಕ್ಕೆಬ್ಬಿಸಿ ಅಂದದ್ದೇನಂದರೆ—"ರಾಜಾ, ತಮ್ಮಂಥ ಜೀವನ್ಮುಕ್ತರು ಹೀಗೆ ದುಃಖಿಸುವದು ಸರಿಯಲ್ಲ. ತಾಯಿಯನ್ನಗಲಿ ಹೋಗಲಾರದ ಹೆಣ್ಣುಮಕ್ಕಳಂತೆ, ಈಗ ನನ್ನ ಸ್ಥಿತಿಯಾಗಿರುತ್ತದೆ. ವಿಯೋಗವು ನಿಜವಾಗಿ ದುಃಖವೇ ಸರಿ; ಹೋಗದಿದ್ದರೆ ನಿರ್ವಾಹವಿಲ್ಲ. ತಡವಾದರೆ ತಾತರೇನಂದಾರು? ನೀವೇ ಯೋಚಿಸಿರಿ, ಅಂದರಾಯಿತು" ಹೀಗೆ ನುಡಿಯುವಾಗ ಶುಕರ ಕಣ್ಣೊಳಗಿಂದ ದುಃಖಾಶ್ರುಗಳ ಬಂದೆರಡು ಹನಿಗಳಾದರೂ ಉದರದೆ ಇರಲಿಲ್ಲ! ಆಗ ಜನಕನು-ಇನ್ನು ಮೇಲೆ ನಾನು ಏನೂ ಮಾತಾಡಲಾರೆನು. ಈಗ ನನ್ನ ಮನಸ್ಸು ವಿಕ್ಷಿಪ್ತವಾಗಿದೆ, ವಿಕಾರಪರವಶವಾಗಿದೆ. ಆದರೆ ಮುನಿಕುಮಾರರೇ, ನಾನು ಗೃಹಸ್ಥಾಶ್ರಮಿ ಇದ್ದದರಿಂದ ಹೀಗೆ ದುಃಖಿತನಾಗುವದು ತಪ್ಪಲ್ಲ; ಯತಿಯಾಗಿದ್ದರೆ ಇಷ್ಟುಹೊತ್ತಿಗೆ ಆಶ್ರಮಭ್ರಷ್ಟನಾಗುತ್ತಿದ್ದೆನು. ಶುಕಾಚಾರ್ಯರೇ, ಗೃಹಸ್ಥಾಶ್ರಮದಲ್ಲಿ ಮಾತ್ರ ಇಂಥ ಪ್ರಮಾದಗಳೊದಗಿದರೂ ಅವನ್ನು ಪ್ರಾಯಶ್ಚಿತ್ತದಿಂದ ಕ್ಷಾಲನ ಮಾಡಿಕೊಳ್ಳಲಿಕ್ಕೆ ಬರುತ್ತದೆ. ಇದನ್ನು ಮಾತ್ರ ಮರೆಯಬೇಡಿರಿ, ಎಂದನು. ಈ ಮೇರೆಗೆ ಮಾತಾಡುತ್ತ ಒಬ್ಬರಿಗೊಬ್ಬರು ಆಲಿಂಗನಕೊಟ್ಟು, ತಮ್ಮ ತಮ್ಮ ಹಾದಿಗೆ ಹತ್ತಿದರು.

ಇತ್ತ ಶುಕಾಚಾರ್ಯರು, ಮಿಥಿಲಾನಗರದಿಂದ ಹೊರಟಮೇಲೆ ಮೊದಲಿನಂತೆ ಅನೇಕ ಪರ್ವತ, ಗಹ್ವರ, ತೀರ್ಥ, ಯಾತ್ರಾಸ್ಥಳಗಳನ್ನು ದಾಟುತ್ತ ವ್ಯಾಸಾಶ್ರಮಕ್ಕೆ ಬಂದರು. ದೂರಿಂದಲೇ ಮಗನ ಬರುವಿಕೆಯನ್ನು ಕಂಡು, ವ್ಯಾಸರಿಗೆ ಬಹಳ ಸಂತೋಷವೆನಿಸಿತು. ಆಶ್ರಮದ ಹೊರಗೆ ಅವರು ಬಂದು ನಿಲ್ಲುವ

ಷ್ಟರಲ್ಲಿ ಶಂಕರಾಚಾರ್ಯರು ಬಂದು, ತಾತರ ಪಾದಕಮಲಗಳಿಗೆ ಸಾಷ್ಟಾಂಗನಮ ಸ್ಕರಿಸಿದರು. ಮಗನನ್ನು ಮೇಲಕ್ಕೆತ್ತಿ ಮುದ್ದಿಟ್ಟು, ತಮ್ಮ, ಬಾಳಾ ಶುಕಾ, ನಿನಗೆ ಅಖಂಡ ಕಲ್ಯಾಣವಿರಲಿ. ಎಲ್ಲಾ ಕ್ಷೇಮವಷ್ಟೇ; ಜೀವನ್ಮುಕ್ತನಾದ ಜನ ಕರಾಯನ ದರ್ಶನವಾಯಿತೇ? ದರ್ಶನದಿಂದ ನಿನ್ನ ಸಂಶಯ ನಿವೃತ್ತಿಯಾಯಿತೇ, ಎಂದು ಕೇಳಿದರು. ಶುಕರು ದಾರಿನಡೆದು ದಣಿದು ಬಂದದರಿಂದ, 'ಹೂ, ಎಂಬ ಒಂದೇ ಸಂಜ್ಞೆಯಿಂದ ಉತ್ತರಕೊಟ್ಟು, ಆಶ್ರಮದಲ್ಲಿ ಹೋಟು ಹೋದರು. ಆಗ ಸಾಯಂಕಾಲದ ಸಮಯವಿದ್ದದರಿಂದ ಸಂಧ್ಯಾವಂದನೆಯನ್ನು ತೀರಿಸಿ, ಸ್ವಸ್ಥ ವಾಗಿ ಮಲಗಿಕೊಂಡರು.

ಮರುದಿವಸ ಪ್ರಾತಃಕಾಲದಲ್ಲಿ ನಿತ್ಯಕೃತ್ಯಗಳನ್ನು ಮುಗಿಸಿಕೊಂಡು ಕುಳಿತಿ ರಲು, ವ್ಯಾಸರು ಶುಕಾಚಾರ್ಯರ ಮುಂದೆ ವಿವಾಹವಿಷಯವಾಗಿ ಪ್ರಶ್ನೆಮಾಡಿ ದರು. ಜನಕರಾಯನಂತೆ ವ್ಯವಹಾರದಲ್ಲಿದ್ದೂ ಇಲ್ಲದಂತೆ ನಡೆಯಲಿಕ್ಕೆ ಬರು ತ್ತಿರುವದರಿಂದಲೂ, ಗೃಹಸ್ಥಾಶ್ರಮದಲ್ಲಿ ಆಶ್ರಮಧರ್ಮದಿಂದ ಭ್ರಷ್ಟವಾಗುವ ಭೀತಿಇಲ್ಲದ್ದರಿಂದಲೂ, ನಾನು ಗೃಹಸ್ಥಾಶ್ರಮವನ್ನು ಸ್ವೀಕರಿಸಲಿಕ್ಕೆ ಸಿದ್ಧನಿದ್ದೇ ನೆಂದು ಶುಕರು ಹೇಳಿದರು. ಇದನ್ನು ಕೇಳಿದ ಕೂಡಲೆ ವ್ಯಾಸರಿಗೆ ಅತ್ಯಾಂ ನಂದವಾಯಿತು. ಕೂಡಲೆ ಅವರು ತಮ್ಮ ಕುಲಕ್ಕೂ, ತಮ್ಮ ಮಗನ ಶೀಲಕ್ಕೂ ಯೋಗ್ಯವಾದ ಕನ್ನೆಯನ್ನು ಪಿತೃಗಣದೊಳಗಿಂದ ಆರಿಸಿ ತೆಗೆದು, ಗೊತ್ತುಮಾಡಿ ದರು. ಆಗಿನ ಕಾಲದ ಹುಡುಗೆಯರಲ್ಲಿ ಆ ಕನ್ನೆಯು ಅಲೌಕಿಕ ಚಲುವೆಯೂ, ಚದುರೆಯೂ, ಬಹಳ ದಕ್ಷಳೂ ಆಗಿದ್ದಳು. ನಿಜವಾಗಿ ಅವಳ ಮುಖಕಾಂತಿಯು ಚಂದ್ರಪ್ರಕಾಶದಂತೆ ಆಹ್ಲಾದದಾಯಕವಾಗಿತ್ತು. ಅವಳ ಮುಖಲಕ್ಷಣವು ಅತ್ಯಂತ ಸೌಮ್ಯವಾಗಿ, ಕೋಮಲವೂ, ಸರಲವೂ ಆದ ಅವಳ ಅಂತಃಕರಣದ ಪ್ರತಿಬಿಂಬವನ್ನು ತೋರಿಸುತ್ತಿತ್ತು. ತುಟಿಯು ಹವಳದಂತೆ ಕೆಂಪಾಗಿತ್ತು. ಹಣೆಯು ಮುಂಗುರುಳಿನಿಂದ ಮನೋಹರವಾಗಿತ್ತು. ಗಲ್ಲಗಳು ಉಬ್ಬಿಗೊಂಡು ಹೊಳೆಯುತ್ತಿದ್ದವು. ಕೂದಲುಗಳು ಕಸ್ತೂರಿಯಂತೆ ಕಪ್ಪಾಗಿ ಸರಳವಾಗಿಯೂ ತಕ್ಕಂತೆ ಉದ್ದವಾಗಿಯೂ ಇದ್ದವು. ಮೈಕೈಗಳ ಮಾಟವು ಅಂದವಾಗಿಯೂ ಅಚ್ಚುಕಟ್ಟಾಗಿಯೂ ಇತ್ತು. ಮೈಬಂಣವು ಕೇದಗಿಯಂತೆ ಸುವರ್ಣದ್ದಾ ಗಿತ್ತು. ಆದೇ ಯೌವನದ ಉದಯವಾದದರಿಂದ ಅವಳ ಮುಗುಳುನಗೆಯೂ, ಚಪಲ ನೇತ್ರಗಳೂ, ಎಲ್ಲರನ್ನು ಆನಂದಗೊಳಿಸುತ್ತಿದ್ದವು. ಸಾರಾಂಶ ಎಲ್ಲ ಅವಯವಗಳು ಪ್ರಮಾಣಕ್ಕೆ ತಕ್ಕಂತೆ ಸುಂದರವಿದ್ದದರಿಂದ, ಶುಕರಂಥ ಮುನಿ ಕುಮಾರನಿಗೆ ಆ ಕನ್ನೆಯು ತಕ್ಕವಳಾಗಿದ್ದಳು. ತಪೋವನದಲ್ಲಿ ಹೆಂಗಸರಿಗೆ

ಬೆಳ್ಳಿ, ಬಂಗಾರ, ಮುತ್ತು, ರತ್ನಗಳ ಆಭರಣಗಳು ಎಲ್ಲಿಂದ ಬರಬೇಕು ; ವಿಚಿತ್ರ ಬಣ್ಣದ ಹೂವಿನ ಮಾಲೆಗಳೂ, ಹೂಗೊಂಚಲುಗಳೂ ಅವರ ಅಲಂಕಾರಗಳು. ಈ ಕನ್ಯೆಯಾದರೂ ಮಲ್ಲಿಗೆ, ಪಾರಿಜಾತ ಮೊದಲಾದ ಮೊಗ್ಗೆಗಳಿಂದ ಕೂಡಿದ ಮಾಲೆಗಳನ್ನು ಕೊರಳಲ್ಲಿಯೂ, ಹೆರಳಲ್ಲಿಯೂ ಹಾಕಿಕೊಂಡಿದ್ದಳು. ಕಿವಿಯಲ್ಲಿ ಪಂಚವರ್ಣದ ಹೂವಿನ ಗೊಂಚಲುಗಳನ್ನು ಮುಡಿದಿದ್ದಳು. ಇದರಿಂದ ಆಕೆಯ ಸ್ವಾಭಾವಿಕಸೌಂದರ್ಯವೇ ಮತ್ತಿಷ್ಟು ಮುದ್ದಾಗಿ ಒಪ್ಪಹತ್ತಿತು. ಇಂಥ ಚೆಲುವೆಯು ವ್ಯಾಸಪುತ್ರರಿಗೆ ನಿಶ್ಚಯವಾದದ್ದು, ಆಗಿನ ಮುನಿಮಂಡಲಕ್ಕೆಲ್ಲ ಸಂತೋಷಪ್ರದವಾಯಿತು. ವಾಙ್ನಿಶ್ಚಯವಾದ ಕೂಡಲೆ ಎರಡೂ ಪಕ್ಷದವರು ಮದುವೆಯ ಸಿದ್ಧತೆಯನ್ನು ಒತ್ತರದಿಂದ ನಡೆಸಿದರು. ಈ ಮಂಗಲ ಕೃತ್ಯಕ್ಕೆ ವ್ಯಾಸರು ದೊಡ್ಡ ದೊಡ್ಡ ಋಷಿಗಳನ್ನು ಅತ್ಯಾಗ್ರಹದಿಂದ ಕರೆಸಿಕೊಂಡರು. ಅನೇಕ ಋಷಿಪತ್ನಿಯರೂ, ತಾಪಸಿನಿಯರೂ ಈ ಶುಭಸಮಾರಂಭವನ್ನು ಸಾಂಗಗೊಳಿಸುವದಕ್ಕಾಗಿ ತಾವೇ ಬಂದು, ತಮ್ಮ ಮನೆಯ ಕಾರ್ಯದಂತೆ ಕೆಲಸ ಮಾಡುತ್ತಿದ್ದರು. ಅಡಿಕೆ, ತೆಂಗು, ಬಾಳೆ ಈ ಮೂರೇ ಗಿಡಗಳಿಂದ ಬೀಗರ ಸಲುವಾಗಿ ಅಲ್ಲಲ್ಲಿಗೆ ಮಂಟಪಗಳನ್ನೂ, ಪರ್ಣಕುಟೀರಗಳನ್ನೂ ವ್ಯಾಸಶಿಷ್ಯರು ನಿರ್ಮಾಣಗೊಳಿಸಿದ್ದರು. ಪಂಚಪಲ್ಲವಗಳನ್ನೂ, ಕಬ್ಬಿನಗಳಗಳನ್ನೂ ಎಲ್ಲ ಹಂದರಗಳಿಗೆ ಮಂಗಲಕರವಾದವುಗಳೆಂದು ಕಟ್ಟಿದ್ದರು. ಬೀಗರ ಕೂಡ ಸಿದ್ಧ, ಯಕ್ಷ, ಗಂಧರ್ವ ಮೊದಲಾದವರು ತಮ್ಮ ತಮ್ಮ ಹೆಂಡಿರೊಡನೆ ವಿವಾಹಕ್ಕೆ ಬಂದಿದ್ದರು. ಆಯಾ ಸುಪ್ರಸಂಗಕ್ಕೆ ಸರಿಯಾಗಿ ಸೀಮಾಂತಪೂಜೆ, ಬಿಸಿಲಾಟ, ಮಧುಪರ್ಕ ಮುಂತಾದ ಕೆಲಸಗಳು ಯಥಾಸ್ಥಿತವಾಗಿ ಸಾಂಗವಾದವು. ವ್ಯಾಸರ ಹಾಗು ಬೃಹಸ್ಪತ್ಯಾಚಾರ್ಯರ ವೇದವೇತ್ತರಾದ ಅನೇಕಜನ ಶಿಷ್ಯರು ವೇದಘೋಷವನ್ನು ಮಾಡುತ್ತಿರಲು, ಬ್ರಾಹ್ಮಣಶ್ರೋತ್ರಿಯರು ಮಂಗಳಾಷ್ಟಕಗಳನ್ನು ಅನ್ನುತ್ತಿರಲು, ಸುವಾಸಿನಿಯರಾದ ಮುನಿಪತ್ನಿಯರು ಮಂಗಲಕರವಾದ ವಿವಾಹಗೀತಗಳನ್ನು ಹಾಡುತ್ತಿರಲು, ಮಂಗಳವಾದ್ಯದ ಇಂಪಾದ ಸಪ್ಪಳವು ದಿಕ್ತಟಾಕಗಳಲ್ಲಿ ತುಂಬಿರಲು, ಶುಭಮುಹೂರ್ತದಲ್ಲಿ ದೇವ, ಬ್ರಾಹ್ಮಣ, ಅಗ್ನಿ ಇವರ ಸಮಕ್ಷಮ ಶುಕಾಚಾರ್ಯರು “ಪೀವರೀ” ಎಂಬ ಹೆಸರಿನ ಪಿತೃಕುಲಪ್ರಸೂತಳಾದ ಕನ್ಯೆಯ ಪಾಣಿಗ್ರಹಣಮಾಡಿದರು. ಪೀವರೀದೇವಿಯೂ ಪರಮೋಲ್ಲಾಸದಿಂದ ಶುಕರ ಕೊರಳಲ್ಲಿ ಮಂದಾರಮಾಲೆಯನ್ನು ಹಾಕಿದಳು. ವೈದಿಕವಿಧಿಯು ಯಥಾಸಾಂಗ ಮುಗಿದಬಳಿಕ, ವೃದ್ಧರಾದ ನಾರೀಮಣಿಯರು ವಧೂವರರಿಂದ ಊಟಣಿಯನ್ನು ಮಾಡಿಸಿದರು. ಒಗಟುಗಳನ್ನರಿಯದ ನಮ್ಮ ಶುಕಾಚಾರ್ಯರು ಆ ವೃದ್ಧ ಪುರಂ

ಥ್ರಿಯರು ಹೇಳಿದಂತೆ ಕೇಳಬೇಕಾಯಿತು. ನಾಚುತ್ತ ನಾಚುತ್ತ, ಶುಕರು ಊಟಣಿಯನ್ನು ಮಾಡುವಾಗ ವ್ಯಾಸರ ಆನಂದವನ್ನು ವರ್ಣಿಸಲಾಸಲ್ಲ! ಹೆಂಗಸರಂತೂ ಜಾತ್ಯ ಲಜ್ಜಾಭಿಮಾನದ ದೇವತೆಗಳು, ಕೇಳುವದೇನು. ಅವರು ನಸುನಾಚಿಕೆಯಿಂದ, ಮುಗುಳುನಗೆಯಿಂದ, ಒಯ್ಯಾರದಿಂದ, ಮೇಲಿಂದಮೇಲೆ ಸೆರಗುಸರಿಮಾಡಿಕೊಳ್ಳುತ್ತ, ಮದುವೆಯ ಮಹೋತ್ಸವದಲ್ಲಿ ಮಾಡುವ ಪ್ರತಿಯೊಂದು ಕೆಲಸಗಳು ಸರ್ವಾನಂದಕಾರಕವಾಗಿಯೇ ಕಾಣುತ್ತಿದ್ದವು. ಗಂಧಪರಿಮಳಗಳನ್ನು ಅರ್ಪಿಸಿದ ಬಳಿಕ ಪೀವರೀದೇವಿಯು ಮನೋವಾಕ್ಕಾಯಗಳಿಂದ ತನ್ನ ಸರ್ವಸ್ವವನ್ನೇ ಶುಕಾಚಾರ್ಯರ ಸ್ವಾಧೀನಮಾಡುವಳೋ, ಏನೋ, ಎಂಬಂತೆ, ಊಟಣಿಯ ಕೊನೆಗೆ, ಕೂಡಿದ ಹೆಂಣುಮಕ್ಕಳ ಕಡೆಗೆ ಮೋರೆದಿರುವಿ, ಲಜ್ಜಾಭರದಿಂದ ಶುಕರಕಡೆಗೆ ಕೈಚಾಚಿ, ಅವರ ಕೈಯ್ಯಲ್ಲಿ ತಾಂಬೂಲವನ್ನು ನಾಚನಾಚುತ್ತ ಕೊಟ್ಟಳು. ಅಹಾ! ಆಗಿನ ಪ್ರಸಂಗದ ಚಿತ್ರವನ್ನು ತೆಗೆಯಲಿಕ್ಕೆ ಆ ವಧೂವರರ ಸುದೈವಗಳೆಂಬ ಚಿತ್ರಗಾರರೇ ಸಮರ್ಥರಾದಾರಲ್ಲದೆ, ಉಳಿದವರಿಂದ ಆಗದು. ಹೀಗೆ ವಿನೋದದ ಪ್ರಸಂಗಗಳಿಂದಲೂ, ಊಟ-ಉಡಿಗೆಗಳ ಸೌಕರ್ಯದಿಂದಲೂ, ಆರತಿ-ಅಕ್ಷತೆಗಳ ಕಾಲದ ಮಂಗಲಗಾನಗಳಿಂದಲೂ, ಬೀಗರೇ ಮುಂತಾದ ಸರ್ವರಿಗೆ ಪರಮಾನಂದವಾಯಿತು. ಶುಕಾಚಾರ್ಯರಂಥ ಅಪ್ರತಿಮ ಅಳಿಯಂದಿರು ಸಿಕ್ಕದ್ದಕ್ಕಾಗಿ ಪೀವರೀದೇವಿಯ ತಾಯಿಗೆ ಅತ್ಯಾನಂದವಾಯಿತು. ಶುಕರ ಮಾವನಿಗಾದರೂ ಅಳಿಯಂದಿರ ವಿದ್ವತ್ತೆಯೂ, ನಿಸ್ಪೃಹತೆಯೂ, ಬ್ರಹ್ಮಚರ್ಯವರ್ಚಸ್ಸೂ ಇವನ್ನು ನೋಡಿ, ಬಹು ಸಮಾಧಾನವಾಯಿತು. ಸಾಂಪ್ರದಾಯದಂತೆ ಶ್ರೀ ಶುಕಾಚಾರ್ಯರು ಹದಿನಾರುದಿವಸ ಮಾವನ ಮನೆಯಲ್ಲಿಯೇ ಇದ್ದು, ಬಳಿಕ ತಮ್ಮ ಆಶ್ರಮಕ್ಕೆ ಬಂದರು. ವ್ಯಾಸರಾದರೂ ಶಿಷ್ಟಾಚಾರದಂತೆ ಸೊಸೆಯನ್ನು ಮನೆತುಂಬಿಸಿಕೊಂಡು, ಒಂದೆರಡು ದಿವಸಗಳ ಮೇಲೆ ತವರಮನೆಗೆ ಕಳಿಸಿದರು. ಇತ್ತ ವಿವಾಹಕ್ಕೆ ಬಂದ ಸರ್ವಜನರಿಗೆ ಯೋಗ್ಯತೆಯಂತೆ ಅನ್ನವಸ್ತ್ರಗಳಿಂದ ಸಂತುಷ್ಟಗೊಳಿಸಿ, ಅವರಿಗೆ ಅಪ್ಪಣೆಕೊಟ್ಟು ಕಳಿಸಿದರು.

ಮುಂದೆ ಕೆಲವು ಕಾಲ ಸಂದಿದಮೇಲೆ ಪೀವರೀದೇವಿಯು ಪ್ರೌಢಳಾಗಿ ಗೃಹಕೃತ್ಯಗಳಿಗೆ ತಕ್ಕವಳಾದುದರಿಂದ ಅವಳ ತಂದೆಯು ಅವಳನ್ನು ಅಳಿಯನ ಸ್ವಾಧೀನ ಮಾಡಿ, ಸಂಗಡ ತನ್ನ ಶಕ್ತಿಯ ಮೇರೆಗೆ, ಹಾಸಿಕೆ, ಹೊದಿಕೆ, ಹಣ, ಆಕಳು ಮುಂತಾದವುಗಳನ್ನು ಬಳುವಳಿಯಾಗಿ ಮಗಳಿಗೆ ಕೊಟ್ಟು ಕಳುಹಿದನು. ಪ್ರಪಂಚವು ಬೆಳೆದದರಿಂದ ಶುಕರಿಗಾಗಿ ಪ್ರತ್ಯೇಕವೇ ಒಂದು ಪರ್ಣಶಾಲೆಯನ್ನು ವ್ಯಾಸರು ಕಟ್ಟಿಸಿ ಕೊಡಬೇಕಾಯಿತು. ಮಗನ ಪ್ರಪಂಚಕ್ಕಾಗಿ ದ್ರವ್ಯಸಂಪಾ

ದನೆ ಮಾಡುವ ಪ್ರಸಂಗವು ವ್ಯಾಸರಿಗೆ ಈಗ ಬಂತು. ಆಗಿನ ಕಾಲದ ರಾಜರ್ರು ವ್ಯಾಸರ ವಿಷಯದಲ್ಲಿ ಕೊಡಗೈದೊರೆಗಳೇಆಗಿದ್ದರು. ವ್ಯಾಸರುಬೇಕಾದಷ್ಟು ದ್ರವ್ಯ ವನ್ನು ಅಲ್ಪಕಾಲದಲ್ಲಿಯೇ ಮಗನಿಗೆ ತಂದುಕೊಟ್ಟರು; ಗೃಹಸ್ಥಾಶ್ರಮವನ್ನು ಸಾಗಿ ಸಲಿಕ್ಕೆ ಅವರಿಗೆ ಯಾವ ತೊಂದರೆಯೂ, ಚಿಂತೆಯೂ ಬಾರದಹಾಗೆ ಎಲ್ಲ ವ್ಯವ ಸ್ಥೆ ಮಾಡಿಕೊಟ್ಟರು. ಸೊಸೆಗೂ, ಮಗನಿಗೂ ತಮ್ಮ ಉಪಸರ್ಗವು ಎಳ್ಳಷ್ಟೂ ಆಗಬಾರದೆಂದು, ತಮ್ಮ ಹೋಮಶಾಲೆಯನ್ನು ಪ್ರತ್ಯೇಕವಾಗಿಯೇ ಕಟ್ಟಿಸಿಕೊಂ ಡರು. ಶುಕರಾದರೂ ಜನಕರಾಯನಂತೆ ಗೃಹಸ್ಥಾಶ್ರಮದ ಎಲ್ಲ ಕೆಲಸಗಳನ್ನು ಯಥಾಸ್ಥಿತವಾಗಿ ಸಾಗಿಸಿದರು. ಅಗ್ನಿಹೋತ್ರದ ಎಲ್ಲ ಕೃತ್ಯಗಳನ್ನು ಅವರ್ರು ಮಾಡುತ್ತಿದ್ದರೂ ಅವುಗಳಲ್ಲಿ ಆಸಕ್ತಿಯನ್ನಿಟ್ಟಿದ್ದಿಲ್ಲ. ಸುಖದುಃಖಗಳನ್ನೂ, ಶೀತೋ ಷ್ಣಗಳನ್ನೂ, ಲಾಭ-ಹಾನಿಗಳನ್ನೂ ಮನಸ್ಸಿನಲ್ಲಿ ತರದೆ, ಒದಗಿದಂಥ ಸ್ಥಿತಿಯಲ್ಲಿ ಯೇ ಆನಂದಪಟ್ಟು ಕಾಲಕ್ರಮಣಮಾಡಹತ್ತಿದರು. "ಬದುಕಿರುವ ತನಕ ಶ್ವಾಸೋಚ್ಛ್ವಾಸವು ಪ್ರಾಣಿಗಳಿಗೆ ಬಿಟ್ಟದ್ದಲ್ಲವಷ್ಟೇ. ಅದೇ ಮೇರೆಗೆ ನಾನಾದರೂ ಹೆಂಡತಿ ಇರುವವರೆಗೆ ಸಂಸಾರಕೃತ್ಯಗಳನ್ನು ನೆರವೇರಿಸತಕ್ಕದ್ದು. ಶ್ವಾಸೋ ಚ್ಛ್ವಾಸಗಳನ್ನು ಮಾಡುತ್ತಿರುವಾಗ ಯಾರೂ ಸ್ವರ್ಗಾದಿಫಲಗಳನ್ನು ಬೇಡುತ್ತಿರು ವದಿಲ್ಲ; ಆದರೆ ಶ್ವಾಸೋಚ್ಛ್ವಾಸಗಳ-ಪ್ರಾಣಾಯಾಮಗಳ-ಮೂಲಕವೇ ಸುಜ್ಞ ರು ಅಪರಿಮಿತವಾದ ಸುಕೃತವನ್ನು ಗಳಿಸುತ್ತಾರೆ. ಅದೇಮೇರೆಗೆ ನಾನು ಈ ಆಶ್ರಮ ಕೃತ್ಯಗಳನ್ನು ಈಶ್ವರ ಪ್ರಸನ್ನತೆಯ ಸಲುವಾಗಿಯೇ ಮಾಡುವೆನು. ಅಂದರೆ, ಕಾಯಿಕ, ವಾಚಿಕ, ಮಾನಸಿಕ ಕೃತ್ಯಗಳನ್ನೆಲ್ಲ ಈಶ್ವರನಲ್ಲಿಯೇ ಕೃಷ್ಣಾರ್ಪ ಣಪೂರ್ವಕ ಸಮರ್ಪಿಸಿ, ಅದರ ಯೋಗದಿಂದ 'ಚಿತ್ತಶುದ್ಧಿ'ಎಂಬ ಉತ್ತಮ ಫಲ ವನ್ನು ಪಡೆಯುವೆನು." ಎಂಬೀ ಭಾವನೆಯಿಂದಲೇ ಅವರು ಸಂಸಾರಸಾಗಿಸುತ್ತಿ ದ್ದರು. "ಮನಸಿ ಚ ಪರಿತುಷ್ಟೇ ಕೋಽರ್ಥವಾನ್ ಕೋ ದರಿದ್ರಃ॥"ಮನಸ್ಸಿನಲ್ಲಿ ಅಚ್ಚಳಿಯದ ಸಂತೋಷವು ತುಂಬದ ಬಳಿಕ ಬಡವನಾರೋ! ದರಿದ್ರನಾರೋ! ಎಲ್ಲರೂ ಒಂದೇ! ಹೀಗೆ ಶುಕರು 'ಬಂದದ್ದನ್ನೆಲ್ಲ ಬೆಲ್ಲಕ್ಕಿಂತ ಸವಿ' ಎಂದು ತಿಳಿದು ಸಂಸಾರಸಾಗಿಸುತ್ತ ನಡೆದದರಿಂದಅವರ ಶಾರೀರಿಕ-ಮಾನಸಿಕ-ಸಾಮರ್ಥ್ಯಗಳು ಮಿತಿಮೀರಿ ಬೆಳೆದವು. ಅಂತರಂಗವು ಆತ್ಮಚಿಂತನದಲ್ಲಿಯೂ, ಬಹಿರಂಗವು ಸಂಸಾರಸಾಗಿಸುವದರಲ್ಲಿಯೂ ಸೇರಿದ್ದರಿಂದ,ಹೊಲ್ಲದ ಕೆಲಸಗಳು ಅವರ ಕೈಯಿಂ ದ ಘಟಿಸಲಿಲ್ಲ. ತರುಣಿಯಾದ ತಮ್ಮ ಪತ್ನಿಯ ಸಂಗಡ ಯಥಾಶಾಸ್ತ್ರ ವ್ಯವ ಹರಿಸಿದ್ದರಿಂದ ಗೃಹಸ್ಥಾಶ್ರಮಿಗಳಾಗಿದ್ದರೂ, ಅವರ ತೇಜಸ್ಸೂ, ಬಲವೂ ಕಡಿಮೆ ಯಾಗಿದ್ದಿಲ್ಲ; ಬಾಲಸೂರ್ಯನಂತೆ ಬೆಳೆಯುತ್ತಲೇ ಹೋದವು. ಮನಸ್ಸೇ

ಅಲಿಪ್ತವಿದ್ದದರಿಂದ ಸಂಸಾರವು ಅಮೃತಮಯವಾಯಿತು. ನಿತ್ಯವೂ ಶುಕರು ಹಲವು ಶಿಷ್ಯರಿಗೆ ಅಧ್ಯಯನಮಾಡಿಸುತ್ತಿದ್ದದರಿಂದ, ಅವರ ಅಧ್ಯಯನವು ಮಲಿನವಾಗಲಿಲ್ಲ. ಆಹಾರ--ವಿಹಾರಗಳಲ್ಲಿ ಮಿತಿಯನ್ನಿಟ್ಟುಕೊಂಡದ್ದರಿಂದ ಎಂದೂ ಅವರ ಬೇನೆ ಬೀಳಲಿಲ್ಲ. ಸತ್ಯವನ್ನೇ ಯಾವಾಗಲೂ ನುಡಿಯುತ್ತಿದ್ದದರಿಂದ ಅವರ ವಾಣಿಯು ಅನ್ಯಥಾ ಆಗಲಿಲ್ಲ. ಈ ನೇರೆಗೆ ಅವರು ಪ್ರಪಂಚ ಹಾಗು ಪಾರಮಾರ್ಥಗಳೆರಡನ್ನೂ ಭಿನ್ನವೆಂದೆಣಿಸದೆ ಸುವ್ರತಿಗಳಾಗಿ ನಡೆದದರಿಂದ, ಗೃಹಸ್ಥಾಶ್ರಮವು ಅವರಿಗೆ ಅನರ್ಘ್ಯವಾದ ಮಂಡನದಂತೆಯೇ ಆಗಿತ್ತು. ಶುಕರಂತೆ ಅವರ ಪತ್ನಿಯಾದರೂ ಅವರಿಗೆ ಅನುರೂಪಳಾಗಿಯೇ ಇದ್ದಳು. ಪತಿಶುಶ್ರೂಷೆಯನ್ನು ಅವಳು ಎಂದೂ ಅಂತರಿಸಲಿಲ್ಲ. 'ಪತಿಯೇ ನನ್ನ ಇಷ್ಟ ದೇವರು, ಪತಿಯೇ ನನ್ನ ಸರ್ವಸ್ಸ.' ಎಂದು ತಿಳಿದು, ಯಾವಾಗಲೂ ಅದರಂತೆ ವರ್ತಿಸುತ್ತಿದ್ದಳು. ಪತಿಯು ಧಾರ್ಮಿಕನಿದ್ದದರಿಂದ ತಾನಾದರೂ ಅತಿ ಶ್ರದ್ಧಾಳುವೂ, ಧರ್ಮಿಷ್ಠಳೂ ಆಗಿದ್ದಳು. ಬೆಳಿಗ್ಗೆ ಗಂಡನು ಏಳುವ ಮೊದಲೇ ಎದ್ದು, ನಿತ್ಯಕ್ರಿಯೆಗಳನ್ನು ಮುಗಿಸಿಕೊಂಡು, ಆಶ್ರಮವನ್ನು ಉಡುಗಿ, ಸಾರಿಸಿ, ಗಂಡನ ನಿತ್ಯಾಹ್ನಿಕಕ್ಕೆ ಬೇಕಾಗುವ ಸಾಹಿತ್ಯಗಳನ್ನೆಲ್ಲ ಸಿದ್ಧಗೊಳಿಸಿ, ಆತನನ್ನು ತೋಷಿಸುತ್ತಿದ್ದಳು. ಪತಿಯ ಸಂತೋಷವೇ ತನ್ನ ಸಂತೋಷವು, ಆತನ ಆರೋಗ್ಯವೇ ತನ್ನ ಆರೋಗ್ಯವು, ಆತನ ಧರ್ಮಾಚರಣೆಯೇ ತನ್ನ ಧರ್ಮಾಚರಣೆಯು, ಎಂದು ತಿಳಿದು ನಡೆಯುತ್ತಿದ್ದಳು. ವೇದಘೋಷ, ಶಾಸ್ತ್ರವಾದ, ಶಿಷ್ಯಾಧ್ಯಯನ ಇವು ಶುಕರಲ್ಲಿ ನಿತ್ಯವಾಗಿ ನಡೆಯುತಕ್ಕವಷ್ಟೆ! ಇವನ್ನು ಕೇಳಿ ಕೇಳಿ, ಅವಳು ಬಹುಶ್ರುತಳಾಗಿದ್ದಳು. ಅವಳ ಮನಸ್ಸು ಪ್ರಗಲ್ಭವಾಗಿತ್ತು. ಪತಿಯು ಮಾಡುತ್ತಿರುವ ನಿತ್ಯಾಹ್ನಿಕಕ್ರಿಯೆಗಳ ನಿತ್ಯಸಹವಾಸದ ಯೋಗದಿಂದ ಅವಳ ಮನಸ್ಸು ಪರಿಶುದ್ಧವಾಯಿತು. ತ್ರಿಕಾಲ ಗಂಗಾಸ್ನಾನ, ಕೃಷ್ಣಾಜಿನಹಾಸಿಗೆ, ಅಗ್ನಿಕುಂಡದೊಳಗಿನ ಭಸ್ಮದ ಸಂಸರ್ಗ, ಕುಶ-ಸಮಿಧ ಮುಂತಾದ ಹುಟ್ಟಾ ಪವಿತ್ರವಾದ ಪದಾರ್ಥಗಳಸ್ಪರ್ಶ, ಇವುಗಳಯೋಗದಿಂದ ಆಕೆಯ ಶರೀರವು ಪವಿತ್ರವಾಯಿತು. ಇದರಿಂದ ಅವಳು ಬರಿಯ ಗಂಡನದೇಕೆ, ಯಾವಪ್ರಾಣಿಯ ಮನಸ್ಸನ್ನೂ ನೋಯಿಸುತ್ತಿದ್ದಿಲ್ಲ. ಅವಿನಯದ ಮಾತಂತೂ, ಆಕೆಯಬಾಯಿಂದ ಹೊರಡುತ್ತಿದ್ದಿಲ್ಲ. ಆಕೆಯು ಒಂದುಕ್ಷಣವನ್ನಾದರೂ ನಿರರ್ಥಕ ಕಳೆಯುತ್ತಿದ್ದಿಲ್ಲ; ಪತಿಸೇವೆ, ಮನೆಗೆಲಸ, ಪರೋಪಕಾರ, ನಾಮಸ್ಮರಣ, ಅತಿಥಿ-ಅಭ್ಯಾಗತರ ಸತ್ಕಾರ ಇವುಗಳಲ್ಲಿಯೇ ಅವಳ ಹೊತ್ತು ಹೋಗುತ್ತಿತ್ತು. ಅವಳ ಆತ್ಮಸಂಯಮನವಂತೂ ಹೊಗಳುವಂಥಾದ್ದಿತ್ತು; ದೇವರು ದಯವಿಟ್ಟು ಕೊಟ್ಟದ್ದರಲ್ಲಿಯೇ ಅವಳು ತೃಪ್ತಳಾಗುತಿದ್ದಳು.

ತಿಂಬುಂಬುವದರಲ್ಲಿ, ವಸ್ತ್ರಪಾತ್ರವರಣಗಳಲ್ಲಿ, ವಸ್ತ್ರಬಡವೆಗಳಲ್ಲಿ ಗಂಡನು ಕೈ ಎತ್ತಿ ಪ್ರೀತಿಯಿಂದ ಕೊಟ್ಟದ್ದೇ ಅತಿಶಯ ಉತ್ತಮವೆಂದು ಭಾವಿಸಿದ್ದಳು. ಭೂತ ದಯೆಯಲ್ಲಂತೂ ಆಕೆಯು ಕರುಣಾರಸದ ಪುತ್ತಳಿಯೇ ಆಗಿದ್ದಳು. ಕಠೋರತನವು ಕೊಂಚವೂ ಅವಳಲ್ಲಿದ್ದಿಲ್ಲ; ಹೆರವರ ಸಂಕಟದಲ್ಲಿ ಕೈಮುಚ್ಚಿಕೊಂಡು ಕೂಡ್ರದೆ, ಪತಿಯ ಆಜ್ಞೆಯಂತೆ ಅವರಿಗೆ ಸಹಾಯವಾಗುತ್ತಿದ್ದಳು. ಪತಿಭಕ್ತಿಯಲ್ಲದೆ ಬೇರೆ ಭಕ್ತಿಯು ಅವಳಿಗೆ ಗೊತ್ತಿದ್ದಿಲ್ಲ. 'ಅರ್ಧಾಂಗಿ' ಎಂಬ ಹೆಸರು ಇಂಥ ಕುಲಸ್ತ್ರೀಯರಿಗೇ ಒಪ್ಪುತ್ತದೆ. ಇರಲಿ.

ಸಂಸಾರ ಸುಖವನ್ನನುಭವಿಸುತ್ತ ಶುಕರೂ, ಪೀವರೀದೇವಿಯೂ ಇರುತ್ತಿರಲು, ದೈವಯೋಗದಿಂದ ಅವರಿಗೆ ಕೀರ್ತಿ ಎಂಬ ಹೆಸರಿನ ಒಬ್ಬ ಕನ್ಯೆಯೂ, ಕೃಷ್ಣ, ಗೌರಪ್ರಭ, ಭೂರಿ ವಕ್ತ್ರ, ವೇದಶ್ರವ ಎಂಬ ನಾಲ್ವರು ಗಂಡುಮಕ್ಕಳೂ ಹುಟ್ಟಿದರು. ಶುಕರುಕೀರ್ತಿಯನ್ನು ತಮ್ಮಂತೆ ವೇದವೇತ್ತನೂ, ಸುಜ್ಞನೂ, ವಿಭ್ರಾಜ ಪುತ್ರನೂ ಆದ 'ಅಣುಹಾ' ಎಂಬಾತನಿಗೆ ಕನ್ಯಾದಾನಮಾಡಿಕೊಟ್ಟರು. ಶುಕರು ತಮ್ಮ ಮಕ್ಕಳಿಗೆ ತಾವೇ ಅಧ್ಯಯನಮಾಡಿಸಿದರು. ಹನ್ನೆರಡು ವರ್ಷಗಳಲ್ಲಿ ಆ ಹುಡುಗರು ತಮ್ಮ ತಂದೆ ಹಾಗು ಅಜ್ಜಂದಿರಂತೆ ಬಹುಬುದ್ಧಿಶಾಲಿಗಳಾದ ವಿದ್ವಾಂಸರಾದರು. ಮುಂದೆ ವಿವಾಹಕ್ಕೆ ತಕ್ಕಕಾಲವು ಮಕ್ಕಳಿಗೆ ಬರಲು, ಸತ್ಕುಲ ಪ್ರಸೂತರಾದ ಕನ್ಯೆಯರನ್ನು ನಿಶ್ಚಯಿಸಿ ವ್ಯಾಸರ ಅನುಮತಿಯಿಂದಶುಕಾಚಾರ್ಯರುಮಕ್ಕಳ ಲಗ್ನ ಮಾಡಿದರು. ಆ ಶುಕಪುತ್ರರು ತಮ್ಮ ಪತ್ನಿಯರೊಂದಿಗೆ ಪ್ರಪಂಚಮಾಡುತ್ತ ಉತ್ಸಾಹದಿಂದ ಶುಕಾಶ್ರಮದಲ್ಲಿಯೇ ಕಾಲಕಳೆಯ ಹತ್ತಿದರು.

## ೧೦ ಸಿಂಹಾವಲೋಕನ.

ಇಲ್ಲಿಗೆ ಶುಕಾಚಾರ್ಯರ ಸಚ್ಚರಿತ್ರೆಯ ಕಥಾಭಾಗವು ಮುಕ್ಕಾಲುಪಾಲು ಮುಗಿದಂತಾಯಿತು. ಮುಂದಿನ ಭಾಗವು ಅತ್ಯಲ್ಪವಾಗಿರುವದು. ಅದರಲ್ಲಿ ಶುಕರು ನಾರದಮುನಿಗಳ ಉಪದೇಶದಿಂದ ಬದರಿಕಾಶ್ರಮಕ್ಕೆ ಹೋಗಿ, ಸ್ವಂತ ಉದ್ಧಾರಕ್ಕಾಗಿ ತಪಸ್ಸು ಮಾಡಿದ ವಿಷಯವೂ, ಅಲ್ಲಿಂದ ಸದೇಹವಾಗಿ ಸೂರ್ಯ ಮಂಡಲಕ್ಕೆ ಹೋದ ಸಂಗತಿಯೂ ಹೇಳಿರುವವು.

ವಾಚಕಮಹಾಶಯರೇ, ಇನ್ನು ಪುರಾಣೋಕ್ತವಾದ ಈ ಶುಕಚರಿತ್ರೆಯಿಂದ ನಾವು ಏನೇನು ಕಲಿತುಕೊಳ್ಳಬಹುದಾಗಿದೆಯೆಂಬದನ್ನು ಸಂಕ್ಷಿಪ್ತವಾಗಿ ಬರೆದು ತಮ್ಮ ಅಪ್ಪಣೆ ತೆಗೆದುಕೊಳ್ಳುವೆನು.

ಶ್ರೀ ಶುಕಾಚಾರ್ಯರು ಚಿಕ್ಕಂದಿನಲ್ಲಿ ವ್ಯಾಸರಂಥ ಪುಣ್ಯಾಚರಣೆಯ ಭಾಗ್ಯಶಾಲಿಗಳ ಸಹವಾಸದಲ್ಲಿ ಬೆಳೆದದರಿಂದ, ತಂದೆಯಂತೆ ಮಕ್ಕಳು ಸಾತ್ವಿಕರಾದರು; ಸನ್ಮಾರ್ಗದಲ್ಲಿ ವರ್ತಿಸಿದರು. ಈಗ ನಾವಾದರೂ ಸದಾಚರಣೆಯಿಂದ ನಡೆದು, ಅದೇ ಶೀಲವು ಮಕ್ಕಳಲ್ಲುಂಟಾಗುವಂತೆ ಅನುಕರಣಕ್ಕೆ ತಕ್ಕವರಾಗಬೇಕು. 'ಬಿತ್ತಿದಂತೆ ಬೆಳೆಬರುವದು'. ಶುಕರು ಹುಟ್ಟಿದಂದಿನಿಂದ ಸಾಯುವವರೆಗೆ ನಿತ್ಯವೂ ಗಂಗಾನದಿಯ ತಣ್ಣೀರಿನಲ್ಲಿ ಪ್ರಾತಃಸ್ನಾನ, ಸೂರ್ಯನಮಸ್ಕಾರ ಮುಂತಾದ ಧಾರ್ಮಿಕ ಕೃತ್ಯಗಳನ್ನು ನಿಯಮದಿಂದ ಮಾಡಿದ್ದರಿಂದ, ಅವರ ಶರೀರವು ವಜ್ರದಂತೆ ನಿರೋಗಿಯಾಯಿತು. ತಾವು ದೊಡ್ಡ ತತ್ವವೇತ್ತರಾದ ವ್ಯಾಸರ ಮಕ್ಕಳಾದಾಗ್ಯೂ ಗುರುಗಳಾದ ಬೃಹಸ್ಪತ್ಯಾಚಾರ್ಯರ ಬಳಿಯಲ್ಲಿ ಯಃಕಶ್ಚಿತರಂತೆ ಇದ್ದು, ಗುರುಕುಲವಾಸಮಾಡಿ ವಿದ್ಯಾಗ್ರಹಣಮಾಡಿದರು. ಹನ್ನೆರಡುವರ್ಷ ಪರ್ಯಂತರ ಹಗಲಿರುಳೆನ್ನದೆ, ಹಸಿವೆನೀರಡಿಕೆಗಳನ್ನೆಣಿಸದೆ, ಪೈಗಳ್ಳತನಮಾಡದೆ ವಿದ್ಯಾಸಂಪಾದನಮಾಡಿದ್ದರಿಂದಲೇ ಅವರು ಅಲೌಕಿಕ ಬುದ್ಧಿವಂತರಾದರು. ಬ್ರಹ್ಮಚರ್ಯವೇ ಎಲ್ಲ ಆಶ್ರಮಗಳ ಅಸ್ತಿವಾರವಾದದರಿಂದ ಅದನ್ನು ಪ್ರಯತ್ನಪೂರ್ವಕವಾಗಿ ಪಾಲಿಸಿದರು. ಗೃಹಸ್ಥಾಶ್ರಮದಲ್ಲಿಯೂ ಮಿತಿಯಿಂದ ವರ್ತಿಸಿದ್ದರಿಂದ ಅವರ ಆಯುಷ್ಯವು ಬೆಳೆಯಿತು. ಬರಿಯ ಓದುಬರಹಗಳಿಂದ ಜ್ಞಾನಾರ್ಜನೆಯು ಮುಗಿಯದೆ, ಪ್ರವಾಸ, ಸೃಷ್ಟ್ಯವಲೋಕನ, ದೊಡ್ಡವರ ಆಚರಣನಿರೀಕ್ಷಣ, ಇವುಗಳೂ ಕಾರಣವಾಗಿರುತ್ತವೆಂಬದು ಪ್ರಾಚೀನಕಾಲದಿಂದಲೂ ನಮ್ಮ ಭಾರತೀಯರಿಗೆಗೊತ್ತಾಗಿದೆ; ಅಂತೇವ್ಯಾಸರು, ಬೃಹಸ್ಪತ್ಯಾಚಾರ್ಯರಿಂದ ವಿದ್ಯೆಕಲಿತು ಬಂದ ಬಳಿಕ ತಮ್ಮ ಮಗನನ್ನು ಸಂಚಾರಕ್ಕೆ ಕಳಿಸಿ ವಿಶ್ವನಿರೀಕ್ಷಣದ ಜಿಜ್ಞಾಸೆಯನ್ನು ಪೂರ್ಣಗೊಳಿಸಿ, ಜನಕರಾಯನ ಆಚರಣೆಯನ್ನು ಪ್ರತ್ಯಕ್ಷ ಅವಲೋಕಿಸಲಿಕ್ಕೆ ಕಳಿಸಿದರು. ಇದರ ಮರ್ಮವಾದರೂ ಮೇಲಿನದೇ ಅಲ್ಲವೆ! ಈಗಿನ ತಂದೆತಾಯಿಗಳು ಈ ಹಾದಿಯನ್ನು ಯಾಕೆ ಹಿಡಿಯಬಾರದು. ಮಕ್ಕಳಮೇಲೆ ತಿಂಬುಂಬುವದಕ್ಕೆ ಆಚೆಮಾಡಬೇಕಲ್ಲದೆ, ಓದುಬರಹ ಕಲಿಸುವದರಲ್ಲಿ ಅದು ಎಳ್ಳಷ್ಟೂ ಉಪಯೋಗದ್ದಲ್ಲ. ತಾವು ಬ್ರಾಹ್ಮಣರೂ, ಜನಕರಾಯನು ಕ್ಷತ್ರಿಯನೂ ಇದ್ದದರಿಂದ ಜನಕನಲ್ಲಿ ಹೋಗಿ ತಾವು ಹ್ಯಾಗೆ ಕಲಿತುಕೊಳ್ಳಬೇಕು! ಎಂಬ ಕ್ಷುಲ್ಲಕವಿಚಾರದಗಾಳಿಯುಸಹ ಶುಕರಿಗೆಬಡಿಯಲಿಲ್ಲ; ಇದರಂತೆ ಬ್ರಾಹ್ಮಣಪುತ್ರನಿಗೆ ಉಪದೇಶಮಾಡುವ ಪ್ರಸಂಗ ಬಂತೆಂಬ ಬಡಿವಾರವು, ಜನಕನ ಕನಸ್ಸುಮನಸ್ಸಿನಲ್ಲಿ ಸಹ ಹೊಳೆಯಲಿಲ್ಲ. ವಿದ್ಯೆಕಲಿಯುವವರೂ, ಕಲಿಸುವವರೂ ಈ ರಹಸ್ಯವನ್ನು ಎಷ್ಟು ಮಾತ್ರವೂ ಮರೆಯುವಂತಿಲ್ಲ. ಶುಕರ ಪತ್ನಿಯು ಪತಿ

ಯೇ ದೇವರೆಂದು ತಿಳಿದು ಎಡಬಿಡದೆ ಅವರ ಸೇವೆಯಲ್ಲಿ ಅಂತರವಾಗದಂತೆ ನಡೆದಳು. ತಾನು ಪತಿವ್ರತೆಯೆಂಬ ಜಂಬದಿಂದ ಮೆರೆಯಲಿಲ್ಲ; ಅತಿಥಿ-ಅಭ್ಯಾಗತರ ಸತ್ಕಾರದಲ್ಲಿ ಎಂದೂ ಹೆಚ್ಚುಕಡಿಮೆ ಮಾಡಲಿಲ್ಲ; ಪರೋಪಕಾರದ ಪ್ರಸಂಗವನ್ನು ಎಷ್ಟೂ ಕಳಕೊಳ್ಳಲಿಲ್ಲ. ಕುಲಸ್ತ್ರೀಯರು ಶುಕಪತ್ನಿಯ ಆಚರಣೆಯನ್ನು ಅನುಸರಿಸಿದರೆ ಪ್ರಪಂಚವು ಸುಖಕರವಾಗದೆ ಇರದು. ಪಾರಮಾರ್ಥಿಕ ವಿಚಾರಗಳಿಂದ ಹುಡುಗರಲ್ಲಿ ನೈತಿಕಧೈರ್ಯವೂ, ಕರ್ತವ್ಯದಕ್ಷತೆಯೂ, ಸದಾಚರಣೆಯೂ, ಆಸ್ತಿಕ್ಯಬುದ್ಧಿಯೂ ಬರುತ್ತಿರುವದರಿಂದಲೇ, ವ್ಯಾಸರು ಶುಕರಿಗೆ ಭಾಗವತ ಪುರಾಣವನ್ನು ಶ್ರವಣಮಾಡಿಸಿದರು. ಚಿಕ್ಕಂದಿನಿಂದಲೇ ಹುಡುಗರಿಗೆ ಪುರಾಣ-ಪುಣ್ಯಕಥೆಗಳನ್ನು ಹೇಳಿ, ದೇವರಲ್ಲಿ ಭಕ್ತಿ-ಭಯಗಳುಂಟಾಗುವಂತೆ ಮಾಡಬೇಕು. ಅಂದರೆ, ಅವರು ಮುಂದೆ ಪಾಪಕೃತ್ಯ(ದುಷ್ಕೃತ್ಯ)ಗಳನ್ನು ಮಾಡಲಿಕ್ಕೆಹೇಸುತ್ತಾರೆ. ಹೀಗೆ ಒಂದಲ್ಲ, ಎರಡಲ್ಲ, ಅನೇಕಬೋಧಗಳನ್ನು ಅಜ್ಞರಾದ ನಾವು ಈ ಚರಿತ್ರದ ವಾಚನದಿಂದ ಕಲಿತುಕೊಳ್ಳಬಹುದಾಗಿದೆ. "ಈ ಚರಿತ್ರೆಯು ಗೃಹಸ್ಥಾಶ್ರಮಿಗಳಿಗೆ ಒಂದುಕೈಗನ್ನಡಿಯಾಗಿದೆ" ಎಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

---

ಸಮಾಪ್ತ.



## ನಮ್ಮಲ್ಲಿ ದೊರೆಯತಕ್ಕ ಮುಖ್ಯವಾದ ಪುಸ್ತಕಗಳು.

ಸದ್ಬೋಧ ಚಂದ್ರಿಕೆಯೆಂಬ ಮಾಸಪತ್ರಿಕೆಯು ವಾರ್ಷಿಕಚಂದಾ ೧ ರೂ.

| ಪುಸ್ತಕಗಳ ಹೆಸರು. | ಲೇಖಕರ ಹೆಸರು. | ಬೆಲೆ. |
|---|---|---|
| **ಕಾದಂಬರಿಗಳು.** | | |
| ಪ್ರಬುದ್ಧ ಪದ್ಮನಯನೆ. | ವೇ. ತಿ. ಗಳಗನಾಥ. | ೦-೧೦-೦ |
| ಕಮಲಕುಮಾರಿ. | „ | ೦—೮-೦ |
| ಕುಮುದಿನೀ. | „ | ೦-೧೦-೦ |
| ವೈಭವ. | „ | ೦-೧೦-೦ |
| ಈಶ್ವರೀಸೂತ್ರ. | „ | ೦-೧೨-೦ |
| ಕ್ಷಾತ್ರತೇಜ. | „ | ೦-೧೨-೦ |
| ಧರ್ಮರಹಸ್ಯ. | „ | ೦-೧೨-೦ |
| ಸತೀಸಾಹಸ. | ವೇ. ಶ್ರೀಕಂಠಶಾಸ್ತ್ರೀ. | ೦—೨-೬ |
| ಲಕ್ಷ್ಮೀಬಾಯಿ. | ಮ. ರಾ. ವ. ಮಾ. ತಟ್ಟಿ | ೦-೧೨-೦ |
| **ಪೌರಾಣಿಕಗ್ರಂಥಗಳು.** | | |
| ಭಕ್ತಿವಿಜಯ. ೧ ನೇಭಾಗ | ಯ. ಗು. ಕುಲಕರ್ಣಿ. | ೦—೬-೦ |
| ಮಲ್ಲಾರಿಮಾಹಾತ್ಮ್ಯ. | „ | ೦—೩-೦ |
| ಶಿವಲೀಲಾಮೃತ. | ರಾ. ತ್ರ್ಯ. ಕರ್ಪೂರ | ೦—೫-೦ |
| ಗಿರಿಜಾಕಲ್ಯಾಣ. | ಗಳಗನಾಥ. | ೦—೪-೦ |
| ಶ್ರೀ ಚಿದಂಬರಚರಿತ್ರೆ. | „ | ೦—೮-೦ |
| ಉತ್ತರರಾಮಚರಿತ್ರಸಾರ. | „ | ೦—೪-೦ |
| ಆನಂದರಾಮಾಯಣ. | ವೇ. ಶ್ರೀಕಂಠಶಾಸ್ತ್ರಿಗಳು. | ೧—೦-೦ |
| ದತ್ತಕಥಾಮೃತಸಾರ. | ಕೃ. ತ್ರ್ಯ. ಹಾವನೂರ | ೦—೩-೦ |
| ಶ್ರೀ ವೇಂಕಟೇಶ ಮಾಹಾತ್ಮ್ಯ. | ಮ. ರಾ. ಶ್ರೀ. ನ. ಕಾಟೋಟೆ | ೧—೦-೦ |
| ಶುಕಸಂಜೀವಿನಿ. | ಕೃ. ಶ. ಇಂಗಳಗಿಕರ. | ೦-೮-೦ |
| **ಪ್ರಬಂಧಗಳು.** | | |
| ಕುಟುಂಬ. | ಗಳಗನಾಥ. | ೦—೫-೦ |
| ರಾಜನಿಷ್ಠೆ. | ಗಳಗನಾಥ. | ೦—೨-೦ |
| ಕಾಣ್ವ ತ್ರಿಕಾಲಸಂಧ್ಯಾ. | ಯಸ್. ನಾರಾಯಣಶಾಸ್ತ್ರೀ. | ೦—೨-೦ |
| ಪುನರ್ಜನ್ಮ. | ವ. ಮಾ. ತಟ್ಟಿ. | ೦—೩-೦ |
| ಸೃಷ್ಟಿಯ ಸದುಪದೇಶ. | „ | ೦—೨-೦ |
| ಶ್ರೀ ಶುಕ್ಲಯಜುರ್ವೇದಕಾಣ್ವ ಸಂಹಿತೆ. | | ೪—೦-೦ |

ಸೂಚನೆ—ಟ. ಖ. ಬೇರೆ. ೫ ರೂಪಾಯಿಗಳಿಗಿಂತ ಹೆಚ್ಚು ಬೆಲೆಯ ಪುಸ್ತಕಗಳನ್ನು ತೆಗೆದುಕೊಳ್ಳುವವರಿಗೆ ೧೦೦ ಕ್ಕೆ ೫ ರಂತೆ ಕಮಿಶನ್

ಮ್ಯಾನೇಜರ ಸ. ಚ. ಪೋ॥ ಆನಂದವನ (ಅಗಡಿ.)